# ಗ್ರಹಲೀಲೆ.

(ಸಾಮಾಜಿಕ ಕಾದಂಬರಿ.)



ಲೇಖಕ:—

ಶ್ರೀ ಶೇಷಾಚಲ ಚರಣ ಕಿಂಕರ,

ಆನಂದವನ.



ಪ್ರಕಾಶಕ:—

ಭಿ. ಪ. ಕಾಳೆ,

ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.



1931



[ ದ್ವಿತೀಯ ಮುದ್ರಣ. ]

ಬೆಲೆ ೧೨ ಆಣೆ.

# ಮುನ್ನುಡಿ.

ಪ್ರಸ್ತುತದ ಈ ಸಾಮಾಜಿಕ ಕಾದಂಬರಿಯನ್ನು ನಮ್ಮೊಬ್ಬ ಸನ್ಮಿತ್ರರು ಬರೆದಿರುವರು. ಇದರಲ್ಲಿ ಹಿಂದು ಕುಟುಂಬದ ಕಷ್ಟ ಮಯ ಸ್ಥಿತಿಯ ವರ್ಣನೆಯಿದ್ದು, ಕೇವಲ ದುಷ್ಟ ಗ್ರಹಗಳ ಅ[illegible] ಯೋಗವಿದ್ದಾಗ ಆ ಕುಟುಂಬವು ಹೇಗೆ ದುಃ[illegible]ಗಿ, [illegible] ದೆಸೆಯು ಹೊರಳಿದ ಕೂಡಲೆ ಹ್ಯಾಗೆ ಸುಖ[illegible] ದಿವಸಗಳನ್ನು ಕ[illegible]ತೆಂಬುದನ್ನು ಪ್ರಕಟವಾಗಿ ವಿಸ್ತರಿಸಿರುತ್ತದೆ. ಇದರಂತೆ ಮನುಷ್ಯನ ವಿಪತ್ತಿನಲ್ಲಿ ಯಾರು ಸಹಾಯ ಮಾಡುತ್ತಾರೋ ಅವರೇ ಪರಮಾಪ್ತರೆಂಬುದನ್ನು ದಿಗ್ದರ್ಶನ ಮಾಡಿಗ[illegible] ಈ ಕಾದಂಬರಿಯಲ್ಲಿ ಹಲವು ಸಂಗತಿಗಳು ಬೋ[illegible]ಳ್ಳುವಂತಿರುತ್ತವೆ. ಸದಾಶಿವನ ಸಹನಶೀಲತೆ, ನೀತಿಯ [illegible]ಯುಕ್ತಿರುವ ಪ್ರೇಮ, ಭಾಗೀರಥಿದೇವಿಯ ಕನ್ವಾಳುತನ, ಡಾ|| ಪಾಯಸ್, ಗುಡವುಯಿಲ್ ಇವರ ಸದಯತೆ ಮೊದಲಾದ ಸದ್ಗುಣಗಳು ಅವರ್ಣನೀಯವಾಗಿರುತ್ತವೆ. ಅದರಂತೆ ಡಾ|| ರಾಜೆ, ಓರ್ವ ಹಿಂದೂ ನರ್ಸ ಇವರ ಸ್ವಾರ್ಥಪರಾಯಣತೆಯ ದುರ್ಗುಣಗಳು ಅತ್ಯಂತ ತಿರಸ್ಕರಣೀಯವಾಗಿರುತ್ತವೆ. ಈ ಕಾದಂಬರಿಯ ಕೊನೆಯಲ್ಲಿ ಗೋವಿಂದರಾಯರು ಗುರುದತ್ತ ಔಷಧದ ಬೇರಿನಿಂದ ಗುಡ್‌ವುಯಿಲ್ ಇವರ ಅಪರೇಶನ್‌ಕ್ಕೆ ಯೋಗ್ಯವಾದ ಬೆರಳನ್ನು ಐದೇ ಮಿನೀಟುಗಳಲ್ಲಿ ನೆಟ್ಟಗೆ ಮಾಡಿದ್ದನ್ನು ನೋಡಿದರೆ, ಭಾರತ ವನೌಷಧಿಗಳ ಸಾಮರ್ಥ್ಯವು ಎಷ್ಟೆಂಬುದು ವ್ಯಕ್ತವಾಗುತ್ತದೆ. ಹಿಟ್ಟಿನ ಮೇಲೆ ಈ ಕಾದಂಬರಿಯು ಮನೋಹರವೂ, ಸದ್ಬೋಧಪೂರ್ಣವೂ ಆಗಿರುತ್ತದೆ. ಮಾರವಾಡಿಯ ಸಾವುಕಾರಿಕೆ ಎಂಬ ಪ್ರಕರಣವು ಎಲ್ಲರೂ ಲಕ್ಷ್ಯದಲ್ಲಿಡತಕ್ಕದ್ದಾಗಿದೆ.

ಸಜ್ಜನ ವಿಧೇಯ,
ರಾಮಚಂದ್ರ ತ್ರ್ಯಂಬಕ
ಕರ್ಪೂರ.

ಶ್ರೀ ಕ್ಷೇತ್ರ ಆನಂದವನ,
ತಾ|| ೨೬-೬-೧೯೩೭

# ಗ್ರಹಲೀಲೆ.



## ೧ನೆಯ ಪ್ರಕರಣ.



## ಮೂವರು ಬೈರಾಗಿಗಳು.





ನಾಶಿಕ ಕ್ಷೇತ್ರದೊಳಗಿನ ಧರ್ಮಶಾಲೆಯು. ಒಳ್ಳೇ ಮಧ್ಯಾಹ್ನದ ಸಮಯವಾದ್ದರಿಂದ ಕಿಡಿಕಿಡಿಯಾದ ಬಿಸಿಲು ಬಿದ್ದಿತ್ತು. ಇಂಥ ಸಮಯದಲ್ಲಿ ಅಲ್ಲಿಯ ಧರ್ಮಶಾಲೆಯು ಹೇಗೆ ತೆಂವು ಇದ್ದೀತು? ಅದರ ಆಸರಕ್ಕೆ ದಾರಿಕಾರರು ಇರಲಿಕ್ಕ ಬೇಕಲ್ಲವೆ? ಈಗ ಅಲ್ಲಿ ಮೂವರು ಬೈರಾಗಿಗಳು ಬಂದು ಇಳಿದಿದ್ದರು. ಅವರು ಅದರ ಒಳಮಗ್ಗಲಿನ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದರು. ಅವರಲ್ಲಿ ಒಬ್ಬನು ಇಪ್ಪತ್ತೆರಡು ವರುಷಗಳ ಪ್ರಾಯದವನಿದ್ದು, ಉಳಿದ ಇಬ್ಬರಿಗೆ ಮೂವತ್ತು ವರುಷಗಳು ಮಿಕ್ಕಿದ್ದವು. ದಿನಹೋದ ಬೈರಾಗಿಗಳಲ್ಲಿ ಒಬ್ಬನು ಆ ತರುಣ ಬೈರಾಗಿಯ ಕೂಡ ಹರಟುತ್ತ ಕುಳಿತಿದ್ದನು. ಇನ್ನೊಬ್ಬನು ಹತ್ತರದಲ್ಲಿದ್ದ ಮೂಲೆಯಲ್ಲಿ ತನ್ನ ಅಡಿಗೆಯ ಸಾಮಾನುಗಳನ್ನು ಹರವಿಕೊಂಡು ರೊಟ್ಟಿಯನ್ನು ಬೇಯಿಸುವದರಲ್ಲಿ ತೊಡಗಿ

ದ್ದನು; ಆದರೆ ಅವನ ಲಕ್ಷ್ಯವೆಲ್ಲ ಮಾತಾಡುವದರ ಕಡೆಗೇ ಇತ್ತು. ಅವರ ಮಾತುಗಳು ಹಿಂದೀ ಭಾಷೆಯಲ್ಲಿ ನಡೆದಿದ್ದವು; ಆದ್ದರಿಂದ ಅವುಗಳನ್ನು ನಮ್ಮ ವಾಚಕರಿಗಾಗಿ ಇಲ್ಲಿ ಕನ್ನಡಿಸಿದ್ದೇವೆ:—

ವೃದ್ಧ ಬೈರಾಗಿ:—ಇವತ್ತಿನ ವರೆಗೆ ನಿನ್ನಂಥ ಎಷ್ಟೋ ಜನ ಶಿಷ್ಯರನ್ನು ನಾವು ಹಾದಿಗೆ ಹಚ್ಚಿದ್ದೇವೆ. ಹತ್ತರ ವಿದ್ಯೆಯಿಲ್ಲದಿದ್ದರೆ ಈ ದಿವಸಗಳಲ್ಲಿ ಹೊಟ್ಟೆ ಹೊಂಕೊಳ್ಳುವದು ಅತಿ ಕಠಿಣವು. ಎಲೋ, ನಿನ್ನ ಒಪ್ಪಿಗೆ ಇದ್ದರೆ ಇಂಥ ವಿದ್ಯೆಗಳಲ್ಲಿ ಕೆಲವನ್ನು ನಿನಗೆ ಕಲಿಸುವೆನು.

ಆಗ ಮೂಲೆಯಲ್ಲಿ ಕುಳಿತ ಬೈರಾಗಿಯು ನಡುವೇ ಬಾಯಿ ಹಾಕಿ—"ಆದರೆ ಮೊದಲು ನೀನು ಆಣೆಯನ್ನು ಮಾಡು" ಎಂದನು. ಅದಕ್ಕೆ ತರುಣ ಸಂನ್ಯಾಸಿಯು:-"ಹೂಃ, ಆಗಲಿ! ಆಣೆ ಮಾಡುವೆನು; ಆದರೆ ಮೊದಲು ನಿಮ್ಮ ನಿಯಮಗಳೇನಿರುವವೆಂಬದನ್ನು ನ ಹೇಳಿರಿ," ಎಂದು ನುಡಿದನು.

ವೃದ್ಧ ಬೈರಾಗಿ:— ನಿಯಮಗಳು ತೀರ ಸುಲಭವಿರುವವು; ನಾವು ನಿನಗೆ ಕಲಿಸುವ ವಿದ್ಯೆಯನ್ನು ನೀನು ಯಾರ ಮುಂದೆಯೂ ಹೇಳಕೂಡದು. ಅದರಂತೆಯೇ ನಿನಗೆ ಮೊದಲಿನ ಮೂರುವರ್ಷಗಳ ವರೆಗೆ ಬಂದ ದುಡ್ಡನ್ನೆಲ್ಲ ನಮಗೆ ಕೊಡಲಿಕ್ಕೇಬೇಕು. ಮೂರುವರ್ಷಗಳು ಮುಗಿಯುವ ವರೆಗೆ ನೀನು ನಮ್ಮನ್ನಗಲಿ ಓಡಿ ಹೋಗಬಾರದು; ಮತ್ತು ಇಷ್ಟರೊಳಗೇ ಏನಾದರೂ ಅನರ್ಥ ಒದಗಿ ನೀನು ಪೋಲೀಸರ ಕೈಯೊಳಗೆ ಬೀಳುವ ಪ್ರಸಂಗ ಬಂದರೆ ನಮ್ಮ ಗುರುತು ಹತ್ತಗೊಡಬಾರದು.

ತರುಣ ಬೈರಾಗಿ:—ಒಳ್ಳೇದು! ನನಗೆ ಈ ನಿಮ್ಮ ನಿಯಮಗಳ ಒಪ್ಪಿಗೆಯುಂಟು. ನನಗೆ ಬಂದದ್ದನ್ನೆಲ್ಲ ನಿಮಗೇ ತಂದು ಕೊಡುವೆನು; ಆದರೆ ನನ್ನ ಹೊಟ್ಟೆಗೇನು ಹೇಳಲಿ?

ವೃದ್ಧ ಬೈರಾಗಿ:— ಎಲೋ, ಅದರ ಪರಿವೆ ನಿನಗೇಕೆ? ಅದಕ್ಕೆ ಎಳ್ಳಷ್ಟಾದರೂ ಚಿಂತೆ ಮಾಡಬೇಡ.

ಇಷ್ಟಾದ ಬಳಿಕ ಆ ಯುವಕ ಬೈರಾಗಿಯು ಅಣಿಮಾಡಿದನು. ಅದಾದ ಮೇಲೆ ಆ ವೃದ್ಧ ಸಂನ್ಯಾಸಿಯು ತನ್ನ ಜೋಳಿಗೆಯನ್ನು ತೆರೆದು ಅದರೊಳಗಿಂದ ಒಂದು ಕಾಗದದ ಪುಡಿಕೆಯನ್ನು ಹೊರಗೆ ತೆಗೆದನು; ಮತ್ತು ತನ್ನ ಗುರುಮಂತ್ರವನ್ನು ನುಡಿವು ಮಾಡಿ:— ಇಗೋ ನಾನು ಹೇಳಿದ್ದನ್ನೆಲ್ಲ ಚನ್ನಾಗಿ ನೆನಪಿನಲ್ಲಿಡು. ನಮಗೆ ಊರಲ್ಲಿ ಭಿಕ್ಷೆ ಬೇಡುವ ಸಮಯವೆಂದರೆ ಮಧ್ಯಾಹ್ನವು! ಈ ವೇಳೆಯಲ್ಲಿ ಮನೆಯಲ್ಲಿ ಗಂಡಸರಿರುವ ಮಾತಂತೂ ಸುಳ್ಳೇ ಸುಳ್ಳು! ಮನೆಯಲ್ಲಿ ಎಲ್ಲ ರಾಜ್ಯವು ಹೆಂಗಸರದೇ ಇರುತ್ತದೆ. ನಾವು ಮನೆಯ ಬಾಗಿಲಿಗೆ ಭಿಕ್ಷೆ ಬೇಡಲಿಕ್ಕೆ ಹೋಗಿ ನಿಂತಾಗ ಒಳಗಿದ್ದ ಯಾರಾದರೂ ಹೆಂಗಸು ಹಿಂಗು ಹಿಡಿ ಕಾಳು ನೀಡ ಲಿಕ್ಕೆ ಬಂದೇ ಬರುವರು ಆಗ ನಾವು ಸುಮ್ಮ ಅವರ ಕಡೆಗೆ ನೋಡತಕ್ಕದ್ದು. ಸಾಧಾರಣವಾಗಿ ಪ್ರತಿಮನೆಗೆ ಏನಾದರೊಂದು ದುಃಖವು ಬೆನ್ನು ಹತ್ತಿರುವದು. ಅವನಿಂದ ಆ ಹೆಂಗಸು ಭಿಕ್ಷೆಯನ್ನು ಹಾಕುತ್ತಿರುವಾಗ್ಗೆ 'ಅವ್ವಾ, ನೀನು ಅತಿ ದುಃಖ ದಲ್ಲಿರುವಂತೆ ತೋರುತ್ತದೆ' ಎಂದು ಮೆಲ್ಲಗೆ ನುಡಿಯಬೇಕು. ಇದನ್ನು ಕೇಳಿದ ಕೂಡಲೆ ಅವಳು 'ಹೌದಪ್ಪಾ, ಮನೆಯಲ್ಲಿ ಮಕ್ಕ ಳಿಲ್ಲ, ಅಥವಾ ಯಜಮಾನನಿಗ (ಗಂಡನಿಗೆ) ಕೆಟ್ಟ ಚಟವಿದೆ' ಎಂದು ಏನಾದರೂ ಉತ್ತರ ಕೊಡುವಳು; ಇಲ್ಲವೆ ಒಂದುವೇಳೆ ಯಾವ ಳಾದರೊಬ್ಬಳು ದಂಗುಬಡಿದು ನಮ್ಮ ಕಡೆಗೆ ಮಿಕಿ ಮಿಕಿ ನೋಡು ತ್ತ ನಿಲ್ಲಬಹುದು ಆಗ್ಗೆ 'ಅವ್ವಾ ನಿನಗಾಗುವ ನುರುಗು ನನಗೆ ಗೊತ್ತುಂಟು. ಭಗವಂತನ ಮನಸ್ಸಿಗೆ ಬಂದರೆ ಎಲ್ಲವೂ ನೆಟ್ಟಗಾ ದೀತು' ಎಂದು ಅನ್ನಬೇಕು; ಮತ್ತು ಅವಳು ನಮ್ಮ ಈ ಮಾತನ್ನು

ಕೇಳಿ ಸುಮ್ಮನೆ ನಿಂತರೆ ನಾವು ಮತ್ತೆ ಗಂಭೀರವೃತ್ತಿಯನ್ನು ತಾಳಿ: 'ತಾಯಿ, ನಾನು ನಿನಗೆ ಅಂಗಾರವನ್ನು ಕೊಡುತ್ತೇನೆ. ಇದಕ್ಕಾಗಿ ನನಗೇನೂ ಕೊಡಬೇಕಾಗಿಲ್ಲ; ಆದರೆ ದೇವರಿಗೆ ಮಾತ್ರ ಒಂದೂಕಾಲ ರೂಪಾಯಿಯ ಹಣ್ಣು, ಹೂವು, ದಕ್ಷಿಣೆ ಕೊಡಬೇಕಾದೀತು. ಇದರಿಂದ ನಿನ್ನ ಚಿಂತೆಯೆಲ್ಲ ಹಿಂಗುವದು. ಪಾರ್ವತಿ ದೇವಿಯು ನಿನ್ನ ದುಃಖವನ್ನು ದೂರ ಮಾಡುವಳು' ಹೀಗೆಂದು ಆ ಸ್ತ್ರೀಯ ಕಡೆಯಿಂದ ನಮ್ಮ ಮಾತಿಗೆ ಏನಾದರೂ ಎದುರುತ್ತರವು ಬರುವದೋ ಹೇಗೆ ನೋಡಬೇಕು; ಮತ್ತು ಅವಳು ಏನೂ ಉತ್ತರ ಕೊಡದಿದ್ದರೆ ಜೋಳಿಗೆಯನ್ನು ತೆರೆದು, ನಾನು ನಿನಗೆ ಕೊಡುವಂಥ ಪುಡಿಕೆಗಳಲ್ಲಿಯ ಒಂದನ್ನು ಹೊರಗೆ ತೆಗೆದು, 'ಇಗೋ! ಇದು ನೋಡಿರಿ, ಅಂಗಾರವನ್ನು!' ಎಂದು ಅನ್ನಬೇಕು. ಹೀಗೆ ಹೇಳಿ ಆ ದಿನ ಹೋದ ಸಂನ್ಯಾಸಿಯು ತನ್ನ ಜೋಳಿಗೆಯೊಳಗಿಂದ ಹೊರತೆಗೆದ ಆ ಸಣ್ಣ ಪುಡಿಕೆಯನ್ನು ಅವನಿಗೆ ತೋರಿಸಿದನು.

ಆಗ್ಗೆ ತರುಣ ಸಂನ್ಯಾಸಿಯು ಅದನ್ನು ಇಸಗೊಂಡನು ಆ ಪುಡಿಕೆಯ ಸುತ್ತಲೂ ಒಂದು ಕೂದಲನ್ನು ಸುತ್ತಿದ್ದರು ಅದನ್ನು ಕಂಡು ತರುಣನು 'ಈ ಪುಡಿಕೆಗೆ ಕೂದಲು ಎಂತಹದಿರುವದು?' ಎಂದನು. ಅದಕ್ಕೆ ವೃದ್ಧನು:-'ಈ ಕೂದಲವೇ ನನ್ನ ಮಂತ್ರವು! ಈ ಪುಡಿಕೆಯನ್ನು ಹೊರಗೆ ತೆಗೆಯುವಾಗ್ಗೆ ನಮ್ಮ ಎರಡೂ ಕೈಗಳನ್ನು ಜೋಳಿಗೆಯಲ್ಲಿ ಹಾಕಬೇಕು; ಮತ್ತು ಈ ಕೂದಲನ್ನು ಮೆಲ್ಲಗೆ ಬಿಚ್ಚಿ, ಅದರ ತುದಿಯನ್ನು ನಮ್ಮ ಬಲಗೈಯ ನಡುವಿನ ಬೆರಳಿಗೆ ಸುತ್ತಬೇಕು. ಆ ಮೇಲೆ ಆ ಪುಡಿಕೆಯನ್ನು ಅಂಗೈಯಲ್ಲಿರಿಸಿ ಹೊರಗೆ ತೆಗೆಯಬೇಕು. ಒಂದುವೇಳೆ ನಾವು ಏನು ಮಾಡುತ್ತಿರುವೆವೆಂಬದನ್ನು ಆ ಹೆಂಗಸರು ದಿಟ್ಟಿಸಿ ನೋಡುತ್ತಿರಬಹುದು. ಆದರೂ ನಾವು ಬಾಗಿಲ ಮುಂದೆ ಕುಳಿತಿ

ರುವದರಿಂದ ನಮ್ಮ ನೆಳಲು ನಮ್ಮ ಕೈಮೇಲೆ ಬಿದ್ದು ಕೂದಲು ಯಾರಿಗೂ ಕಾಣುವದಿಲ್ಲ. ಇಷ್ಟಾದ ಮೇಲೆ ಆ ಸ್ತ್ರೀಗೆ:—"ತಾಯಿ, ಈ ಅಂಗಾರವನ್ನು ನಿನಗೆ ಕೊಟ್ಟು ನಿನ್ನ ದುಃಖವನ್ನು ನಾನು ತಕ್ಕೊಳ್ಳುತ್ತೇನೆ ಇಗೋ ನೋಡು, ಈ ಅಂಗಾರದಿಂದ ನಿನ್ನ ಎಲ್ಲ ದುಃಖವು ಪರಿಹಾರವಾಗುವಂತಿದ್ದರೆ, ಅದನ್ನು ಈ ಪುಡಿಕೆಯು ಎಳಕೊಂಡು ಬರಲಿ!" ಹೀಗೆಂದು ಆ ಪುಡಿಕೆಯನ್ನು ನೆಲದ ಮೇಲೆ ಇಡಬೇಕು; ಮತ್ತು ನಮ್ಮ ಕೈಯನ್ನು ಮೆಲ್ಲಮೆಲ್ಲನೆ ಮೇಲಕ್ಕೆತ್ತುತ್ತ:—"ಜಯ ಭೋಲಾನಾಥ, ಈ ಸ್ತ್ರೀಯ ದುಃಖವನ್ನು ದೂರ ಮಾಡು; ಇವಳ ಎಲ್ಲ ಬಯಕೆಗಳನ್ನು ಪೂರ್ಣಗೊಳಿಸು. ಆ—ಜಾವ—ಆ—ಜಾವ—ಮಾಯೀಕಾ—ಸಬ್ ದುಃಖ ಆ-ಜಾವ" ಹೀಗೆನ್ನುತ್ತ ನಮ್ಮ ಕೈಯನ್ನು ನಮ್ಮ ಶರೀರದ ಕಡೆಗೆ ಹಿಯ್ಯಬೇಕು. ಅಂದರೆ ಆ ಪುಡಿಕೆಯು ಜಗ್ಗಿದಂತಾಗಿ ಅದು ತುಸ ತುಸ ನಮ್ಮ ಕಡೆಗೆ ಬರತೊಡಗುವದು ಈ ಮೇರೆಗೆ ಹಿಮ್ಮಿಂದೊಮ್ಮೆ ಆ ಪುಡಿಕೆಯು ಸರಿದಾಡುವದನ್ನು ಕಂಡು ಆ ಸ್ತ್ರೀಗೆ ವಿಸ್ಮಯವುಂಟಾಗಿ ನಮ್ಮ ಮೇಲೆ ಅವಳ ಪೂರ್ಣನಂಬಿಗೆಯುಂಟಾಗುವದು. ಹೀಗೆ ಹಿಮ್ಮೆ ವಿಶ್ವಾಸ ಕೂತಿತೆಂದರೆ ಕೇಳುವದೇನು? ಅವಳ ಕಡೆಯಿಂದ ಎರಡು-ಮೂರೇ ಏಕೆ? ಹತ್ತುರೂಪಾಯಿಗಳನ್ನು ಕೂಡಾ ಎಬ್ಬಿಸಬಹುದು!"

ಅಷ್ಟರಲ್ಲಿ ಕೈಯೆಲ್ಲ ಹಿಟ್ಟು ಮುಳುಗಿಸಿಕೊಂಡು ರೊಟ್ಟಿ ಬಡಿಯುತ್ತ ಮೂಲೆಯಲ್ಲಿ ಕುಳಿತ ಆ ಮೂರನೇ ಬೈರಾಗಿಯು: "ಎಲಾ, ಇನ್ನು ಮುಂದೆ ನೀನು ನಿನ್ನ ತಲೆಕೂದಲುಗಳನ್ನು ಕತ್ತರಿಸದೆ, ಜಡೆಯನ್ನು ಬಿಡಬೇಕು ಯಾಕಂದರೆ ಜಡೆಗಳೂ, ಉದ್ದವಾದ ಗಡ್ಡವೂ ಇದ್ದರೆ, ನಾವು ಸಾಧುಗಳೇ ಆಗುತ್ತೇವೆ. ಜನರ ನಂಬಿಗೆಯಾದಾಗೂ ಅರಗಳಿಗೆಯಲ್ಲಿಯೇ ನಮ್ಮ ಮೇಲೆ ಕೂಡುವದು;

ಮತ್ತು ಜನರನ್ನು ವಂಚಿಸಲು ಈ ಜಡೆಗಳಿಂದ ಒಳ್ಳೇ ಉಪಯೋಗ ವಾಗುವದು."

ವೃದ್ಧ ಬೈರಾಗಿ:—"ಅದರ ಉಪಯೋಗವನ್ನು ನಾನು ನಿನಗೆ ಹೇಳುವೆನು. ಇಗೋ, ಆ ನೀರಿನ ಕಮಂಡಲುವನ್ನು ಇತ್ತ ಕಡೆ ತಾ" ಎಂದು ನುಡಿದನು ತರುಣ ಸಂನ್ಯಾಸಿಯು ಕಮಂಡಲು ವನ್ನು ತಂದ ಮೇಲೆ ಮೊದಲನೆಯ ಸಂನ್ಯಾಸಿಯು ತನ್ನ ಜಡೆಗೆ ಹಾಕಿದ ಗಂಟನ್ನು ಬಿಚ್ಚಿದನು; ಮತ್ತು ಅದರೊಳಗಿಂದ ಒಂದು ಸ್ಪಂಜದ ತುಣುಕನ್ನು ಹೊರಗೆ ತೆಗೆದನು ಆ ತುಣುಕನ್ನು ಆ ತರು ಣನ ಕೈಯಲ್ಲಿಟ್ಟು, ಇದಕ್ಕೆ 'ಸ್ಪಂಜ' ಅನ್ನುತ್ತಾರೆ. ನಾಲ್ಕಾಣೆ ರೊಕ್ಕ ಕೊಟ್ಟರೆ ಇದು ಮಾರ್ಕೆಟಿನಲ್ಲಿ ಸಿಗುತ್ತದೆ ಇದರ ಗುಣವೇ ನೆಂದರೆ, ನೀರನ್ನು ಇಂಗಿಸಿಕೊಳ್ಳುವದು ನಾವು ಮಧ್ಯಾಹ್ನದ ಸಮಯದಲ್ಲಿ ಭಿಕ್ಷೆಗೆ ಹೋಗದುವಾಗ ಇದನ್ನು ನೀರಿನಲ್ಲಿ ತೋಯಿಸಿ ಜಡೆಯೊಳಗಿಟ್ಟು ಮೇಲೆ ಗಂಟು ಹಾಕುತ್ತೇವೆ. ಇಗೋ ನೋಡು ನಿನಗೆ ತೋರಿಸಿ ಕೊಡುವೆನು" ಹೀಗೆಂದು ಅವನು ಆ ಸ್ಪಂಜವನ್ನು ನೀರಿನಲ್ಲಿ ಸಾಧಾರಣ ತೋಯಿಸಿ ತನ್ನ ಜಡೆಯಲ್ಲಿ ಅಡಗುವಂತೆ ಇಟ್ಟು, ಅದು ಯಾರಿಗೂ ಕಾಣದಂತೆ ಜಾಣತನದಿಂದ ಜಡೆಯ ಗಂಟು ಹಾಕಿದನು; ಮತ್ತು ಆ ಯುವಕನನ್ನು ಕುರಿತು, "ಜಡೆಯು ಮಾಸಿದ ಹಳದೀ ಬಣ್ಣದ್ದು; ಮತ್ತು ಈ ಸ್ಪಂಜವಾದರೂ ಅದೇ ವರ್ಣದ್ದಿರುವದರಿಂದ ಯಾರಿಗೂ ಕಾಣಿಸಬಾರದು ನೋಡು ನೀನು ಈಗ ಈ ಸ್ಪಂಜದ ಗುರುತು ಹಿಡಿಯುವಿಯಾ?" ಎಂದನು.

ತ. ಬೈರಾಗಿ:—"ಇಲ್ಲ."

ವೃದ್ಧ ಬೈರಾಗಿ:—"ಸಂಸಾರಿ ಭೋಳೆ ಹೆಂಗಸರ ವಿಶ್ವಾಸವನ್ನು ಪಡೆಯಲಿಕ್ಕೆ ಈ ಸ್ಪಂಜವು ಬಹಳ ಉಪಯೋಗದ್ದಾಗುತ್ತದೆ. ನಾವು ಒಂದು ಮನೆಗೆ ಹೋಗಿದ್ದೇವೆಂದು ತಿಳಿದುಕೊಳ್ಳುವ. ಅಲ್ಲಿ

ನವುಗೆ ನಂಬಿಗೆಯುನ್ನು ಪಡೆಯುಬೇಕಾಗಿದ್ದರೆ ಹೀಗೆ ಅನ್ನತಕ್ಕದ್ದು: 'ತಾಯಿಯೊ, ಈ ನನ್ನ ಅಂಗಾರದಿಂದ ನಿನಗೆ ಗುಣವುಂಟಾಗಿ ನಿನ್ನ ಕಾರ್ಯಸಿದ್ಧಿಯಾಗಬೇಕಾಗಿದ್ದರೆ ಭೋಲಾನಾಥ ಶಂಕರನು ನಿನಗೆ ತೀರ್ಥವನ್ನಾದರೂ ಕೊಡಬಹುದು. ಕೈ ಮುಂದೆ ಮಾಡಮ್ಮಾ' ಹೀಗೆಂದು ನಮ್ಮ ಜಡೆಯು ಗಂಟನ್ನು ಸ್ವಲ್ಪ ಮುಂದೆ ಮಾಡಿ ಅದರ ತುದಿಯುನ್ನು ತಲೆಯು ಮೇಲೆ ಹಾಯಿಸಿ ಮುಂದೆ ತರಬೇಕು; ಮತ್ತು ಒಳಗಿನ ಸ್ಪಂಜವು ಹಿಚಕುವಂತೆ ಗಂಟಿನ ಮೇಲೆ ಒತ್ತಿದ ಕೂಡಲೆ ಕೂದಲುಗಳೊಳಗಿಂದ ಟಪಟಪನೆ ನೀರು ಸೋರುವದು. ಈ ತೀರ್ಥ ವನ್ನು ನೋಡಿದ ಮೇಲಂತೂ ಆ ಸ್ತ್ರೀಯುರ ವಿಶ್ವಾಸವು ನಮ್ಮ ಮೇಲೆ ಪೂರ್ಣವಾಗಿ ಕೂಡುವದು. ಆ ಮೇಲೆ ನಾವು ಹೇಳಿದಂತೆ ಅವರು ಕೇಳುವರು.''

ಈ ಮೇರೆಗೆ ಆ ವೃದ್ಧ ಬೈರಾಗಿಯು ತನ್ನ ಶಿಷ್ಯನಿಗೆ ಮಧ್ಯಾಹ್ನದ ವೇಳೆಯುಲ್ಲಿ ಗಂಡಸರು ಮನೆಯಲ್ಲಿ ಇಲ್ಲದಾಗ ಭೋಳೆಭಾವಿಕರಾದ ಸ್ತ್ರೀಯುರನ್ನು ಮೋಸಗೊಳಿಸಿ, ದುಡ್ಡನ್ನು ಎಬ್ಬಿಸುವ ಬಗೆಯುನ್ನು ಕಲಿಸುತ್ತಿರುವಾಗ ಆ ಧರ್ಮಶಾಲೆಗೆ ನಾಲ್ಕನೆಯುವನೊಬ್ಬ ಬೈರಾಗಿಯು ಬಂದನು. ಅದರಿಂದ ಅವರ ಮಾತು ಅಷ್ಟಕ್ಕೇ ನಿಂತಿತು. ಇಲ್ಲದಿದ್ದರೆ ನಮ್ಮ ಪ್ರಿಯುವಾಚಕರೇ! ನಿಮಗೆ ಈ ತಕ್ಕ ಬೈರಾಗಿಗಳ ಇನ್ನೂ ಅನೇಕ ಕುಯುಕ್ತಿಗಳು ತಿಳಿದು ಬರುತ್ತಿದ್ದವು; ಆದರೂ ಈ ಮೇಲಿನ ಮಾತಿನಿಂದ ನಮಗೆ ಎಷ್ಟೋ ಕಲಿಯುತಕ್ಕದ್ದದೆ. ಇಂಥ ಬೈರಾಗಿಗಳು ಹೆಂಗಸರಿಗೆ ತಮ್ಮ ಅಂಗಾರದ ಆಶೆದೋರಿ, ಅವರ ಕಡೆಯಿಂದ ಹೇಗೆ ಹಣವನ್ನು ಸೆಳಕೊಳ್ಳುತ್ತಾರೆಂಬುದು ಎಲ್ಲರ ಲಕ್ಷ್ಯಕ್ಕೆ ಬರಬಹುದು. ಇರಲಿ.

ಹೊಸದಾಗಿ ಬಂದ ಬೈರಾಗಿಯು ಒಳಗೆ ಬಂದ ಕೂಡಲೆ ವಾಡಿಕೆಯುಂತೆ ಅಲ್ಲಿ ಕುಳಿತಂಥ ಬೈರಾಗಿಗಳಿಗೆ ನಮಸ್ಕಾರ ಮಾಡಿ,

'ಜಯ ಸೀತಾರಾಮ' ಎಂಬ ಶಬ್ದಗಳನ್ನು ಉಚ್ಚರಿಸಿದನು; ಮತ್ತು 'ಉಶ್-ಉಶ್' ಎಂದು ಉಸಿರ್ಗರೆಯುತ್ತ ಹತ್ತರದಲ್ಲಿದ್ದ ಮೂಲೆಯ ಕಡೆಗೆ ಹೋದನು ಅವನು ತೆಳ್ಳಗಿನ ಸತೇಜ ವ್ಯಕ್ತಿಯವನಿದ್ದು, ಅವನ ವಯಸ್ಸು ಐವತ್ತರ ಸನಿಯಕ್ಕೆ ಬಂದಿತ್ತು. ಅವನು ಮೈಯಲ್ಲಿ ಒಂದು ಉದ್ದವಾದ ನಿಲುವಂಗಿಯನ್ನು ತೊಟ್ಟಿದ್ದನು. ಅವನ ಹೆಗಲಿಗೆ ಒಂದು ಕಾವೀ ಅರಿವೆಯ ಜೋಳಿಗೆಯು ನೇತಾಡುತ್ತಿತ್ತು. ಬಲಗೈಯಲ್ಲಿ ಸರ್ಪದ ಆಕಾರದ ಅಂಕಡೊಂಕಾದ ಉದ್ದ ಬಡಿಗೆಯೂ, ಎಡಗೈಯಲ್ಲಿ ಒಂದು ಕಮಂಡಲುವೂ ಇದ್ದವು. ಅವನು ಒಳಗೆ ಕಾಲಿಟ್ಟ ಕೂಡಲೆ ಸುತ್ತಲೂ ಒಮ್ಮೆ ನೋಡಿದನು. ಆ ಕೂಡಲೆ ಅವನು ಒಂದು ಮೂಲೆಯಲ್ಲಿ ತನಗೆ ತಕ್ಕ ಸ್ಥಳವೊಂದು ಕಂಡು, ಅಲ್ಲಿ ತನ್ನ ಕೃಷ್ಣಾಜಿನವನ್ನು ಚಲ್ಲಿದನು ನಂತರ ತನ್ನ ಬಡಿಗೆ, ಕಮಂಡಲು, ಜೋಳಿಗೆಗಳನ್ನು ಒತ್ತಟ್ಟಿಗಿಟ್ಟು, ಆ ವ್ಯಾಘ್ರಚರ್ಮದ ಮೇಲೆ ಕುಳಿತನು. ಅವನ ಮುಖಮುದ್ರೆಯು ಪ್ರಫುಲ್ಲಿತವಾದದ್ದೂ, ಆನಂದಮಯವಾದದ್ದೂ ಇತ್ತು. ಅವನು ಹಣೆಯ ಮೇಲಿನ ಬೆವರನ್ನು ಒರಿಸಿಕೊಳ್ಳುತ್ತ ಕ್ಷಣಹೊತ್ತು ದಣಿವಾರಿಸಿಕೊಂಡ ಮೇಲೆ ತನ್ನ ಜೋಳಿಗೆಯನ್ನು ಮುಂದಿಟ್ಟುಕೊಂಡು ಅದರೊಳಗಿನ ಕೆಲ ಸಾಮಾನುಗಳನ್ನು ಹೊರತೆಗೆಯತೊಡಗಿದನು. ಅವನ ಈ ಕೃತಿಯ ಕಡೆಗೆ ಅಲ್ಲಿಯೇ ಕುಳಿತ ವೃದ್ಧ ಬೈರಾಗಿಯ ಕಾಕದೃಷ್ಟಿಯು ಇದ್ದೇ ಇತ್ತು. ಅವನು ಸಾವಕಾಶವಾಗಿ ತನ್ನ ಜೋಳಿಗೆಯೊಳಗಿಂದ ಒಂದು ಚೀಲವನ್ನು ಹೊರಗೆ ತೆಗೆದನು. ಆ ಚೀಲದ ದಾರಕ್ಕೆ ಎಷ್ಟೋ ಗಂಟುಗಳನ್ನು ಬಿಗಿದಿದ್ದನು. ಇದರಿಂದ ಆ ಚೀಲದಲ್ಲಿ ವಿಶೇಷ ಬೆಲೆಯುಳ್ಳ ವಸ್ತುಗಳೇನಾದರೂ ಇರಬಹುದೆಂದು ಉಳಿದ ಇಬ್ಬರು ಬೈರಾಗಿಗಳಿಗೆ ಅನಿಸಿತು. ಅವರಿಬ್ಬರೂ ಅತಿ ತವಕದಿಂದ ಅವನ ಕಡೆಗೆ ನೋಡುತ್ತ ಕುಳಿತರು.

ತನ್ನ ಕೃತಿಯ ಕಡೆಗೆ ಅನ್ಯರ ಲಕ್ಷ್ಯವಿದ್ದೀತೆಂಬ ಕಲ್ಪನೆಯು ಕೂಡ ಆ ಹೊಸ ಬೈರಾಗಿಯ ಮನಸ್ಸಿನಲ್ಲಿದ್ದಿಲ್ಲ. ಅವನು ತನ್ನ ಚೀಲದ ಗಂಟು ಬಿಚ್ಚುವದರಲ್ಲಿಯೇ ತೀರ ಮಗ್ನನಾಗಿದ್ದು, ಮೆಲ್ಲಮೆಲ್ಲನೆ ಬಾಯಿಯಿಂದ ಈಶಸ್ತುತಿಪರವಾದಪದವನ್ನು ಗುಣಗುಟ್ಟುತ್ತಿದ್ದನು.

ಅವನು ಎಲ್ಲಾ ಗಂಟುಗಳನ್ನು ಬಿಚ್ಚಿದನು. ಆ ಮೇಲೆ ಅವನು ಚೀಲದ ಬಾಯಿಯನ್ನು ತೆರೆದು ಅದರೊಳಗಿಂದ ಎರಡು ಮೂರು ತರದ ಗಿಡಮೂಲಿಕೆಗಳನ್ನು ಹೊರಗೆ ತೆಗೆದನು; ಮತ್ತು ಆ ಮೂಲಿಕೆಗಳನ್ನು ಅಂಗೈಯಲ್ಲಿಟ್ಟುಕೊಂಡು ಕೆಲಹೊತ್ತು ಅವು ಗಳ ಕಡೆಗೆ ಏಕಮನಸ್ಸಿನಿಂದ ನೋಡುತ್ತ ಕುಳಿತನು. ಅವನ ಮೋರೆಯ ಮೇಲೆ ಸಂತೋಷದ ಕಳೆಯು ಉಕ್ಕುತ್ತಲಿತ್ತು. ಅವನು ಅತಿ ಪೂಜ್ಯಭಾವದಿಂದ ಆ ಮೂಲಿಕೆಗಳಿಗೆ ನಮಿಸಿ, ಅವುಗಳನ್ನು ತನ್ನ ತಲೆಯ ಧರಿಸಿದನು. ಮತ್ತೊಮ್ಮೆ ಅವುಗಳಿಗೆ ವಂದಿಸಿ ಅವುಗಳ ಕಡೆಗೆ ದಿಟ್ಟಿಸಿ ನೋಡುತ್ತ 'ಇವು ನನ್ನ ಗುರುಗಳ ಪ್ರಸಾದಗಳು! ಈ ಗುರ್ವನುಗ್ರಹದ ಸಹಾಯದಿಂದಲೇ ಅದಷ್ಟು ಲೋಕಕಲ್ಯಾಣ ಮಾಡಲಿಕ್ಕೆ ನನಗೆ ಗುರುಗಳ ಅಪ್ಪಣೆಯಾಗಿದೆ. ನನ್ನ ಮೇಲೆ ಕಟ್ಟಕಡೆಗೆ ಗುರುಕೃಪೆಯಾದಂತಾಯಿತು. ಆಹಹಾ! ನಿಜವಾಗಿ ನಾನು ಧನ್ಯನಾಗಿರುವೆನು. ದಯಾಘನನಾದ ಪರಮೇಶ್ವರನು ಜಗತ್ತಿನ ಕಲ್ಯಾಣಕ್ಕಾಗಿ,-ಸೌಖ್ಯದ ಹೆಚ್ಚಳಕ್ಕಾಗಿ ಮತ್ತು ದುಃಖವನ್ನು ನಾಶಗೊಳಿಸುವದಕ್ಕಾಗಿ ಅಸಂಖ್ಯಾತ ಅದ್ಭುತ ಸಂಗತಿಗಳನ್ನು ನಿರ್ಮಿಸಿದ್ದಾನೆ; ಆದರೆ ಆ ಎಲ್ಲ ಸಂಗತಿಗಳ ಲಾಭವು ಜಗತ್ತಿಗೆ ಆಗಬೇಕಾದರೆ ಗುರುಕೃಪೆಯು ಬೇಕೇಬೇಕು.

'ಯಂವ ಸಾಯಿಜೀ! ಆಪಕೇ ಹಾತಮೇ ಏ ಕ್ಯಾ ಚೀಜ ಹೈ?' ಎಂದು ಬದಿಯಲ್ಲಿ ಕುಳಿತಿದ್ದ ಬೈರಾಗಿಯು ಗುಣುಗುಟ್ಟಿದನು. ಹತ್ತಿರ ಕುಳಿತಿದ್ದ ಇಬ್ಬರೂ ಇದೇನೋ ಚಮತ್ಕಾರವಿರಬಹುದೆಂದು ಅತಿ

ಕೌತುಕಪೂರ್ಣದೃಷ್ಟಿಯಿಂದ ಅವನ ಕಡೆಗೆ ಎವೆಯಿಕ್ಕದೆ ನೋಡ ಹತ್ತಿದರು. ಹೊಸ ಬೈರಾಗಿಯು ನುಡಿದ ಶಬ್ದಗಳು ಅವರಿಬ್ಬರ ಕಿವಿಗೆ ಬಿದ್ದಿದ್ದವು. ಆದ್ದರಿಂದ ಆ ಗಿಡಮೂಲಿಕೆಗಳಲ್ಲಿ ಅಂಥ ವಿಲಕ್ಷಣವಾದ ಗುಣವೇನಿರಬಹುದೆಂಬದನ್ನು ತಿಳುಕೊಳ್ಳುವದಕ್ಕಾಗಿ ಅವರಲ್ಲಿ ಒಬ್ಬನು ಅದರ ವಿಷಯವಾಗಿ ಹೊಸ ಬೈರಾಗಿಗೆ ಪ್ರಶ್ನೆ ಮಾಡಲು, ಅದಕ್ಕೆ ಅವನು: "ಏ ಚೀಜ ಬಹೋತ ಮೂಲ್ಯವಾನ್ ಹೈ. ಏ ಹಮಾರೆ ಗುರುಮಹಾರಾಜಕಾ ಪ್ರಸಾದ ಹೈ!" ಎಂದು ಉತ್ತರ ಕೊಟ್ಟನು.

ಆದಕ್ಕೆ ಆ ವೃದ್ಧಬೈರಾಗಿಯು- "ಶಾಬಾಸ್! ಗುರುಜೀಕಾ ಪ್ರಸಾದ ಹೋಗಾ, ತೋ ಅಲಬತ್ ಏ ಚೀಜ ಬಡೀ ಭಾರಿ, ಔರ ಬಹೋತ ಮೂಲ್ಯವಾನ್ ಹೋಗೀ. ಇಸಮೆ ಬಿಲಕೂಲ ಶಕ ನಹೀ ಹೈ!" ಎಂದು ಒಳ್ಳೇ ಡೌಲಿನಿಂದ ಅಂದನು. ಮತ್ತು "ಮಹಾರಾಜ, ಐಸೀ ಭಾರೀ ಚೀಜ ಬಹೋತ ಭಾರೀ ಕಾಮ ದೇತೀ ಹೋಗೀ, ನಹೀ?" ಎಂದು ಪುನಃ ಪ್ರಶ್ನೆ ಮಾಡಿದನು.

"ಅಲಬತ್" ಎಂದು ನಾಲ್ಕನೆಯ ಬೈರಾಗಿಯು ಹೇಳಿದ್ದನ್ನು ನಮ್ಮ ವಾಚಕರ ಸಲುವಾಗಿ ನಾವು ಕನ್ನಡದಲ್ಲಿಯೇ ಕೊಟ್ಟಿರುತ್ತೇವೆ. ಆ ನಾಲ್ಕನೆಯ ಬೈರಾಗಿಯು: "ಇದರಲ್ಲಿ ಏನು ಸಂದೇಹ ವಿರುವದು? ಈ ಮೂಲಿಕೆಗಳ ಉಪಯೋಗವು ಗಂಡಮಾಲೆ, ಜಲೋದರ, ಮಾರೀಬೇನೆ, ಕ್ಷಯ, ವಾತ ಮೊದಲಾದ ರೋಗಗಳ ಮೇಲೆ ಉತ್ತಮ ರೀತಿಯಿಂದ ಆಗುವದು. ಬೇರೆ ಬೇರೆ ರೋಗಗಳಿಗೆ ಬೇರೆ ಬೇರೆ ಅನುಪಾನಗಳಲ್ಲಿ ಔಷಧವನ್ನು ಕೊಡಬಹುದು," ಎಂದು ಹೇಳಿದನು.

ವೃ ಬೈ:—"ಭಲೇ! ಹಾಗಾದರೆ ಮಹಾರಾಜರೇ, ನೀವು ಈ ಮೂಲಿಕೆಯಿಂದ ಸಾವಿರಾರುರೂಪಾಯಿಗಳನ್ನು ಗಳಿಸಿರಬಹುದು."

ಹೊಸ ಬೈ:—ಛೀ! ಛೀ! ದುಡ್ಡು ಗಳಿಸುವದು ಧರ್ಮವಲ್ಲ; ಮತ್ತು ಅಂಥ ಕೀಳು ಕೆಲಸಗಳನ್ನು ನಾನೆಂದೂ ಮಾಡಲಿಕ್ಕಿಲ್ಲ. ನನ್ನ ಪರಮ ಪೂಜ್ಯ ಗುರುಗಳು ಈ ಮೂಲಿಕೆಗಳನ್ನು ದುಡ್ಡು ಗಳಿಸಲಿಕ್ಕೆಂದು ನನಗೆ ಕೊಟ್ಟಿಲ್ಲ. ನಮ್ಮ ಗುರುಗಳು ಬೇನೆಯಿಂದ ಬಳಲುತ್ತಿರುವ ಅನೇಕರ ಪೀಡೆಗಳನ್ನು ಪರಿಹರಿಸಿ ಅವರ ಮನಸ್ಸಿಗೆ ಸುಖ-ಶಾಂತಿಗಳನ್ನುಂಟು ಮಾಡುವದಕ್ಕಾಗಿ ಅಪ್ಪಣೆ ಮಾಡಿರುವರು.

"ಹೀಗಿದ್ದರೆ ನೆಟ್ಟಗಾಯಿತು. ಈ ಜಗತ್ತಿನಲ್ಲಿ ಹುಟ್ಟಿ ನಾವು ಮಾಡತಕ್ಕದ್ದಾದರೂ ಇದಕ್ಕೂ ಹೆಚ್ಚಿನದೇನಿರುವದು? ಮಹಾರಾಯಾ, ಪರೋಪಕಾರಕ್ಕೆ ಸಮವಾದ ಬೇರೆ ಪುಣ್ಯವೇ ಇಲ್ಲ; ಆದರೆ ಈ ಪುಣ್ಯವು ಎಲ್ಲರಿಗೂ ಸಿಕ್ಕುತ್ತೇಂಬ ನಿಯಮವಿಲ್ಲ; ಹಿಂದಿನ ಜನ್ಮದ ಪುಣ್ಯವಿಲ್ಲದೆ ಇಂಥ ಗುರುಗಳ ಲಾಭವಾಗುವದೂ ಅಪರೂಪ; ಮತ್ತು ಕೈಯಿಂದ ಇಂಥ ಪರೋಪಕಾರದ ಕೆಲಸಗಳು ಜರಗುವದೂ ಕಠಿಣವೇ ಸರಿ!'' ಎಂದು ಆ ಕಪಟ ಮುದಿ ಬೈರಾಗಿಯು ಗಂಭೀರತನವನ್ನು ಧರಿಸಿ ಅಂದನು.

ಹೊಸ ಬೈ:—"ಈ ಮಾತು ನಿಜವಾದದ್ದು. ನೀವು ಅಂದಂತೆ ನನಗೆ ಇಂಥ ಗುರುಗಳ ಪ್ರಾಪ್ತಿಯಾದ್ದರಿಂದ ನಾನು ಧನ್ಯನೇ ಸರಿ"

ವೃದ್ಧ ಬೈ:—ಮಹಾರಾಜ, ತಾವು ಚಿಲಿಮೆಯನ್ನು ಸೇದುವಿರೇನು?

ಹೊಸ ಬೈ:—ಹೂ! ಯಾವಾಗಾದರೊಮ್ಮೆ ಸೇದುತ್ತೇನೆ.

ಕೂಡಲೆ ವೃದ್ಧ ಬೈರಾಗಿಯು ತನ್ನ ಜೋಳಿಗೆಯೊಳಗಿಂದ ಚಿಲಿಮೆಯನ್ನು ಹೊರಗೆ ತೆಗೆದನು; ಮತ್ತು ಟೊಂಕದ ಸುತ್ತಲೂ ಬಿಗಿದ ಅರಿವೆಯೊಳಗಿಂದ ಹಿಂದು ಕಾಗದದ ಪುಡಿಕೆಯನ್ನು ಹೊರಗೆ ತೆಗೆದನು. ಆ ಪುಡಿಕೆಯಲ್ಲಿ ಕೊಂಚ ತಂಬಾಕವಿತ್ತು. ಕೂಡಲೆ ಎರಡನೆಯ ಬೈರಾಗಿಯು ಆ ಪುಡಿಕೆಯಲ್ಲಿದ್ದ ತಂಬಾಕವನ್ನೆಲ್ಲ

ಚಿಲಿಮೆಯಲ್ಲಿ ತುಂಬಿ ಕಾಗದವನ್ನು ಬಿಸಾಡಿದನು ಆ ಕಾಗದವು ಹೊಸ ಬೈರಾಗಿಯ ಹತ್ತರ ಹೋಗಿ ಬಿತ್ತು. ಅದನ್ನು ಅವನು ಸಹಜವಾಗಿ ತಕ್ಕೊಂಡು ನೋಡಲು, ಅದು ಒಂದು ವರ್ತಮಾನ ಪತ್ರದ ಹರಿದ ಚೂರೆಂದು ಕಂಡು ಬಂದಿತು. ಅವನು ಆ ಮುದುಡಿಯಾದ ಕಾಗದವನ್ನು ಸರಿಗೊಳಿಸಿ ಓದಲಿಕ್ಕೆ ಸುರುವು ಮಾಡಿದನು. ಇಷ್ಟರಲ್ಲಿ ಆ ಬೇರೊಬ್ಬ ಬೈರಾಗಿಯು ಚಿಲಿಮೆಯನ್ನು ಹೊತ್ತಿಸಿ ಅದನ್ನು ಅವನ ಮುಂದೆ ಹಿಡಿದನು; ಆದರೆ ಅದರ ಕಡೆಗೆ ಆ ಹೊಸ ಬೈರಾಗಿಯ ಲಕ್ಷ್ಯವು ರವಷ್ಟಾದರೂ ಇರಲಿಲ್ಲ ಅವನು ಆ ಹರಕ ಕಾಗದದ ತುಂಡಿನ ಮೇಲಿದ್ದ ಛಾಪಿಸಿದ ಸಂಗತಿಯನ್ನು ಓದುವದರಲ್ಲಿಯೇ ತಲ್ಲೀನನಾಗಿ ಹೋಗಿದ್ದನು. ಆಗ ಆ ಚಿಲಿಮೆಯ ಹಿಡಿದವನು ಅವನ ಹೆಗಲಿಗೆ ಕೈ ಹಚ್ಚಿ ಗಟ್ಟಿಯಾಗಿ ಒದರಿ:—"ಲೇವೋ ಮಹಾರಾಜ, ದಮ್ ಲಗಾವ!" ಎಂದು ಹೇಳಿದನು. ಆಗ ಆ ಹೊಸ ಬೈರಾಗಿಯು ಅವನ ಕಡೆಗೆ ಮೋರೆ ತಿರುವಿದನು, ಆದರೆ ಆಗ್ಗೆ ಆತನ ಮುಖಚರ್ಯೆಯ ಮೇಲೆ ವಿಲಕ್ಷಣವಾದ ಹೆಚ್ಚು-ಕಡಿಮೆಯುಂಟಾಗಿತ್ತು. ಸ್ವಲ್ಪ ಹೊತ್ತಿನ ಹಿಂದೆ ಪ್ರಫುಲ್ಲಿತ ಮತ್ತು ತೇಜಸ್ಸಿನಿಂದ ಉಕ್ಕುತ್ತಿರುವ ಅವನ ಮೊಗವು ಈಗ ಬತ್ತಿ ಬಾಡಿ ಹೋಯಿತು ಅವನು ಅರಗಳಿಗೆಯ ವರೆಗೆ ಚಿಲಿಮೆಯನ್ನೆತ್ತಿದವನ ಕಡೆಗೆ ಹುಚ್ಚನಂತೆ ನೋಡುತ್ತ ಸುಮ್ಮನೆ ಕುಳಿತನು. ಸದ್ಯಕ್ಕೆ ಎಲ್ಲಿರುತ್ತೇನೆಂಬದರ ಅರಿವು ಸಹ ಅವನಿಗಿದ್ದಂತೆ ತೋರಲಿಲ್ಲ. ಹೊಸ ಸಂನ್ಯಾಸಿಯು ಆ ಕಾಗದದ ತುಂಡನ್ನು ಓದುತ್ತಿರುವಾಗ್ಗೆ ತನ್ನ ಕೈಯೊಳಗಿನ ಔಷಧದ ಗಿಡ-ಮೂಲಿಕೆಗಳನ್ನು ಅಲ್ಲಿಯೇ ನೆಲದ ಮೇಲೆ ಇಟ್ಟಿದ್ದನು. ಅವುಗಳಲ್ಲಿಯ ಎರಡು ಮೂಲಿಕೆಗಳನ್ನು ತಕ್ಕೊಂಡು ಆ ವೃದ್ಧ ಬೈರಾಗಿಯು ಅವನಿಗೆ "ಸಾಯಿಬ ಮಹಾರಾಜ, ನಿಮ್ಮ ಮುಖವು ಇಷ್ಟರಲ್ಲಿಯೇ

ಹೀಗೆ ಚಿಂತಾಕ್ರಾಂತವಾಗಲು ಕಾರಣವೇನು? ಆ ಕಾಗದದಲ್ಲಿ ಏನಾದರೂ ಕೆಟ್ಟ ಭವಿಷ್ಯವನ್ನು ಬರೆದಿರುವರೋ ಹೇಗೆ? ನಮ ಗಾದರೂ ಹೇಳಿರಿ'' ಎಂದು ಅಂದನು

ಹೊಸ ಬೈ — ''ಅದರಲ್ಲಿ ಹೇಳುವಂಥಾದ್ದೇನೂ ಇಲ್ಲ.'' ಎಂದು ಅವನು ಮುಂದೆ ಚಾಚಿದ ಚಿಲಿಮೆಯನ್ನು ತಕ್ಕೊಂಡು ಸುಮ್ಮನೆ ಎರಡು ಝುರಿಕೆಗಳನ್ನು ಸೇದಿ ಆತನಿಗೆ ತಿರುಗಿ ಕೊಟ್ಟು ಬಿಟ್ಟನು.

ವೃದ್ಧ ಬೈ — ''ಮಹಾರಾಜರೇ, ಈ ಎರಡು ಮೂಲಿಕೆ ಗಳನ್ನು ಕೊಟ್ಟರೆ ನಮ್ಮ ಮೇಲೆ ತಮ್ಮ ಅಗಣಿತ ಉಪಕಾರವಾದಂ ತಾಗುವದು. ನಾವಾದರೂ ನಾಲ್ಕು ಮಂದಿ ಬಡಬಗ್ಗರ ದುಃಖ ನಿವಾರಣಕ್ಕಾಗಿಯೇ ಇವುಗಳ ಉಪಯೋಗವನ್ನು ಮಾಡುವೆವು'' ಎಂದನು; ಆದರೆ ಈ ಮಾತಿನ ಕಡೆಗೆ ಆ ಹೊಸ ಬೈರಾಗಿಯ ಲಕ್ಷ್ಯವೇ ಇದ್ದಿಲ್ಲ. ಅವನು ಮತ್ತೆ ಆ ಕಾಗದವನ್ನೇ ಓದುವದ ರಲ್ಲಿ ಮಗ್ನನಾಗಿರುವನೆಂಬದನ್ನು ನೋಡಿ, ಆ ಇಬ್ಬರೂ ಬೈರಾಗಿ ಗಳು ಅವನನ್ನು ಕೇಳದೆ. ತಮ್ಮ ತಮ್ಮೊಳಗೆ ಕಣ್ಣುಸನ್ನೆಯಿಂದ ಏನೇನೋ ಮಾತಾಡಿಕೊಂಡು, ಮೂಲಿಕೆಗಳನ್ನು ಹಿಡಿದ ವೃದ್ಧ ಬೈರಾಗಿಯು ಅವೆರಡನ್ನೂ ತನ್ನ ಜೋಳಿಗೆಯ ಪಾಲು ಮಾಡಿ ಬಿಟ್ಟನು! ಹೀಗೆ ಅಕಲ್ಪಿತವಾಗಿ ಕೈಗೆ ಬಂದ ಅಪರೂಪ ವಸ್ತು ಗಳಿಂದ ತಾನು ಬೇಕಾದಷ್ಟು ದ್ರವ್ಯಗಳಿಸಿಕೊಳ್ಳಬಹುದೆಂದು ನೆನೆದು ಅವನು ಮನದೊಳಗೆ ಹಿರಿ ಹಿರಿ ಹಿಗ್ಗಿದನು! ಅವನು ತನ್ನ ಚಿಲಿಮೆಯನ್ನು ತಕ್ಕೊಂಡು ಹಿಂದರ ಮೇಲೊಂದರಂತೆ ಅನೇಕ ಝುರಿಕೆಗಳನ್ನು ಹೊಡೆದು, ಆ ಧರ್ಮಶಾಲೆಯ ತುಂಬ ಹೊಗೆ ಇಡಿಗಿಸಿ ಬಿಟ್ಟನು. ಇಷ್ಟಾದರೂ ಆ ನೂತನ ಬೈರಾಗಿಯ ಪೂರ್ಣ ಲಕ್ಷ್ಯವು ಕಾಗದದ ಕಡೆಗೇ ಇತ್ತು. ಆಗ್ಗೆ ಅವನ ಮನದೊಳಗೆ

ತರತರದ ವಿಚಾರ ತರಂಗಗಳ ತಾಕಲಾಟವು ನಡೆದಿತ್ತು. ವಾಚಕ ಮಹಾಶಯರೇ! ಆ ಬೈರಾಗಿಯು ಇಷ್ಟು ವಿಚಾರಮಗ್ನನಾಗು ವಂತೆ ಆ ಕಾಗದದ ತುಂಡಿನಲ್ಲಿ ಯಾವ ಸಂಗತಿಯು ಇದ್ದಿತೆಂಬ ದನ್ನು ಕುರಿತು ವಿಚಾರ ಮಾಡುವ.

## ವಿದ್ಯಾರ್ಥಿಗಳ ಔದಾರ್ಯ.

"ಮೊನ್ನೆ ಮುಂಬಯಿಯಲ್ಲಿಯ ಥಾದರದೊಳಗಿನ ಹಿಂದು ಶಾಲೆಯು ಎಲ್ಲ ವಿದ್ಯಾರ್ಥಿಗಳು ಕೂಡಿ. ಸಣ್ಣದಾದರೂ ಹಿಂದು ಅಪೂರ್ವವಾದ ಸಮಾರಂಭವನ್ನು ಮಾಡಿದರು. ಆ ಶಾಲೆಯಲ್ಲಿ ಸದಾಶಿವ ಗೋವಿಂದ ವೈಶಂಪಾಯನನೆಂಬ ಹೆಸರಿನ ಒಬ್ಬ ಹುಡು ಗನು ಹೊಸದಾಗಿ ಇಂಗ್ರಜಿ ಏಳನೆ ಇಯತ್ತೆಗೆ ಹೋಗಿದ್ದನು ಈ ಹುಡುಗನು ಅತಿ ಚುರುಕುಬುದ್ಧಿಯುವನೂ ಉದ್ಯೋಗಿಯೂ, ಚಪ ಲನೂ ಇದ್ದಾಗ್ಯೂ ಅತಿ ಬಡತನದ ಸಲುವಾಗಿ ಮತ್ತು ತಾಯಿಯ ಬೇನೆಯ ಸಲುವಾಗಿ ಶಾಲೆಯನ್ನು ಬಿಡಬೇಕಾಯಿತು. ಕಳೆದ ಎರಡು ವರ್ಷಗಳಲ್ಲಿ ಈ ಹುಡುಗನಿಗೆ ಹಲವು ಜನ ದಯಾಳು ಗಳಾದ ಸದ್ಗೃಹಸ್ಥರು ಸ್ವಹಸ್ತ ಪರಹಸ್ತಗಳಿಂದ ಸಹಾಯ ಮಾಡಿದರು. ಈ ಹುಡುಗನು ತನ್ನ ಅತ್ಯುತ್ತಮವಾದ ಆಚರಣೆ ಯಿಂದಲೂ. ಮೇಲ್ತರದ ಸ್ವಭಾವದಿಂದಲೂ ಎಲ್ಲ ಹುಡುಗರಿಗೂ ಬಲು ಬೇಕಾಗಿದ್ದನು ಪ್ರತಿಕೂಲ ಮನೆತನದ ಸ್ಥಿತಿಯ ದೆಶೆಯಿಂದ ಆ ಹುಡುಗನು ಶಾಲೆಯನ್ನು ಬಿಟ್ಟು ತೆರಳುವನೆಂದು ತಿಳಿದ ಕೂಡಲೆ ಆ ಶಾಲೆಯ ವಿದ್ಯಾರ್ಥಿಗಳೆಲ್ಲರು ಅವನಿಗೆ ಸಹಾಯ ಮಾಡಲಿಕ್ಕೆ ತಮ್ಮತಮ್ಮೊಳಗೆ ಹಣಕೂಡಿಸತೊಡಗಿದರು. ಶಿಕ್ಷಕವರ್ಗವೂ ತಮ್ಮ ಕೈಯಿಂದಾದಷ್ಟು ದುಡ್ಡು ಕೊಟ್ಟು-" ಇಷ್ಟೇ ಸಂಗತಿಯು ಆ ಕಾಗ ದದ ಮೇಲಿತ್ತು. ಆ ಅಪೂರ್ಣ ಸಂಗತಿಯೇ ನಮ್ಮ ಬೈರಾಗಿಯ ಮನಸ್ಸಿನ ಪ್ರಸನ್ನತೆಯನ್ನು ಸೂರೆಗೊಂಡಿತು. ಮೆಲ್ಲಮೆಲ್ಲನೆ ಅವನ್ನು

ತನ್ನ ಜೋಳಿಗೆಯನ್ನು ತುಂಬಿ ಹೆಗಲಿಗೆ ಹಾಕಿದನು; ಮತ್ತು ಬೇರೆ ಬೈರಾಗಿಗಳ ಮಾತಿನ ಕಡೆಗೆ ಲಕ್ಷ್ಯಗೊಡದೆ ಅವನು ಹುಮ್ಮಿಂದೊಮ್ಮೆ ಭ್ರಮಿಷ್ಟನಂತೆ ಆ ಧರ್ಮಶಾಲೆಯಿಂದ ಹೊರಬಿದ್ದನು.

## ೩ನೆಯ ಪ್ರಕರಣ.



## ಕೃಷ್ಣೆಯ ಪತ್ರ.

"ಅಮ್ಮಾ. ಭಿಕ್ಷೆ ಹಾಕಿರಿ" ಮಧ್ಯಾಹ್ನದ ಎಂಟು ತಾಸು ವೇಳೆಯಾಗಿತ್ತು. ದಾದರದೊಳಗಿನ ಪೇಟೆಯ ಹತ್ತರದ ಒಂದು ಸಣ್ಣ ಓಣಿಯೊಳಗಿನ ಒಂದು ಕೋಣೆಯ ಬಾಗಿಲದ ಮುಂದೆ ಒಬ್ಬ ಬೈರಾಗಿಯು ಬಂದು ನಿಂತು ಮೇಲಿನಂತೆ ಒದರಿದನು. ಕೋಣೆಯ ಹೊರಬಾಗಿಲದ ಬಳಿಯಲ್ಲಿ ಹನ್ನೆರಡು ವರ್ಷದ ಒಬ್ಬ ಹುಡಿಗೆಯು ಯಾರದೋ ದಾರಿನೋಡುತ್ತ ನಿಂತಿದ್ದಳು. ಅಷ್ಟರಲ್ಲಿ ಎದುರಿಗೆ ಬರುತ್ತಿರುವ ಬೈರಾಗಿಯ ಕಡೆಗೆ ಅವಳ ದೃಷ್ಟಿಯು ಹೋಯಿತು. ಆ ಬೈರಾಗಿಯ ನಡಿಗೆಯ ಮೇಲಿಂದ, ಅವನು ತಮ್ಮ ಮನೆಗೇ ಭಿಕ್ಷೆಗೆ ಬರುವನೆಂದು ತಿಳಿದ ಆ ಹುಡಿಗೆಯು, ಬಾಗಿಲದ ಮರೆಗೆ ಅಡಗಿಕೊಂಡು ನಿಂತಳು. ತಾನು ಹೀಗೆ ಮಾಡಿದರೆ ಭಿಕ್ಷುಕನು ಹಾಗೆಯೇ ಮುಂದೆ ಹೋಗಬಹುದೆಂದು ಅವಳು ತಿಳಿದಿದ್ದಳು; ಆದರೆ ಬೈರಾಗಿಯು ಬಂದವನೇ ಆ ಬಾಗಿಲದ ಮುಂದೆಯೇ ನಿಂತು ಮೇಲೆ ಹೇಳಿದಂತೆ "ಅಮ್ಮಾ, ಭಿಕ್ಷೆ ಹಾಕಿರಿ" ಎಂದು ಗಟ್ಟಿಯಾಗಿ ಒದರಿದನು.

ಆಗ ಆ ಹುಡಿಗೆಯು ನಿರುಪಾಯದಿಂದ ಮುಂದಕ್ಕೆ ಬಂದು: "ಬಾವಾಜೀ, ಮುಂದಿನ ಮನೆಗೆ ಹೋಗು" ಎಂದು ಹೇಳಿದಳು

ಅದಕ್ಕೆ ಅವನು:—"ಏನಮ್ಮಾ, ಇನ್ನು ನಾನು ಭಿಕ್ಷೆ ಬೇಡುವ ಮನೆಯು ಇದೊಂದೇ; ನೀನು ಹಾಕುವ ಹಿಡಿಕಾಳು ನನಗೆ ಸಾಕು! ನನ್ನ ನಿಯಮದಂತೆ ನಾನು ಇನ್ನು ಆರನೆಯ ಮನೆಗೆ ಭಿಕ್ಷೆಗೆ ಹೋಗುವದಿಲ್ಲ" ಎಂದನು.

"ಬಾವಾಜಿಯವರೇ, ನಾನು ಭಿಕ್ಷೆಯನ್ನೇನು ನೀಡಲಿ? ಮನೆಯಲ್ಲಿ ಒಂದು ಒಡಕ ಕಾಳಾದರೂ ಇಲ್ಲ!" ಎಂದು ಹೇಳುವಾಗ ಆ ಹುಡಿಗೆಯ ಕಾತರ ಸ್ವರದ ಮೇಲಿಂದ ಅವಳ ಕೋಮಲವಾದ ಅಂತಃಕರಣಕ್ಕೆ ಯಾವ ತರದ ವೇದನೆಯಾಗುತ್ತಿರುವದೆಂಬದನ್ನು ಆ ಬೈರಾಗಿಯು ಕಂಡು ಹಿಡಿದನು. ಅವನು ಒಂದು ಕ್ಷಣಹೊತ್ತಿನವರೆಗೆ ಆ ಹುಡಿಗೆಯ ದೀನ ಮುಖದ ಕಡೆಗೆ ನೋಡಿದನು; ಮತ್ತು ಕೂಡಲೆ ತನ್ನ ಹೆಗಲ ಮೇಲಿನ ಜೋಳಿಗೆಯನ್ನು ಕಳಗಿಳಿಸಿದನು.

"ಮಗಳೇ, ಇಷ್ಟು ದುಃಖಿತಳಾಗಬೇಡ. ಆ ದೀನರಕ್ಷಕನಿಗೆ ಎಲ್ಲರ ವಿಷಯವಾಗಿ ಸಮನಾಗಿಯೇ ಚಿಂತೆ ಇರುವದು. ಈ ಅಕ್ಕಿಯನ್ನು ಹಿಡಿ" ಹೀಗೆಂದು ಬೈರಾಗಿಯು ಆ ದೀನವದನೆಯಾದ ಹುಡಿಗೆಯ ಹತ್ತರ ಜೋಳಿಗೆಯೊಳಗಿನ ಅಕ್ಕಿಯನ್ನೆಲ್ಲ ಸುರುವಿದನು.

"ಬಾವಾಜೀ, ಇವನ್ನು ನಾನು ಹೇಗೆ ತಕ್ಕೊಳ್ಳಲಿ? ಅಣ್ಣನಿಗೆ ತಿಳಿದರೆ ಸಿಟ್ಟು ಮಾಡಿಯಾನು"

"ಹೇಗೆ ತಕ್ಕೊಳ್ಳಲೆಂದು ವಿಚಾರ ಮಾಡಬೇಡ! ನಿನ್ನ ಮೇಲೆ ಯಾರೂ ಸಿಟ್ಟಿಗೇಳಲಾರರು"

ಹು:—ನೀವು ಕಷ್ಟಪಟ್ಟು ನಾಲ್ಕು ಮನೆಗಳಲ್ಲಿ ಬೇಡಿತಂದ ಅಕ್ಕಿಯನ್ನು....ಬಾವಾಜಿಯು ನಡುವೆ ಬಾಯಿ ಹಾಕಿ ಆದರೆ ಅದರ ಉಪಯೋಗವನ್ನು ಯೋಗ್ಯ ಸ್ಥಳದಲ್ಲಿ ಮಾಡಿದ್ದಕ್ಕಾಗಿ ಜಗದೀಶನು ಪ್ರಸನ್ನನಾಗುವನು. ಅಮ್ಮಾ, ಇನ್ನು ನಿನ್ನ ಮನಸ್ಸಿನಲ್ಲಿ ಸಂದೇಹ ಪಡಬೇಡ ಹೋಗು. ಅಂಜಿಕೆ ಇಲ್ಲದೆ ಈ ಅಕ್ಕಿಯನ್ನು

ಮನೆಯೊಳಗೆ ತಕ್ಕೊಂಡು ಹೋಗು, ಎಂದು ನುಡಿದು ಆ ಬೈರಾಗಿಯು ಉತ್ತರದ ಹಾದಿಯನ್ನು ನೋಡದೆ ಹಿಂತಿರುಗಿ ತನ್ನ ದಾರೀ ಹಿಡಿದು ಹೋದನು.

ಕ್ಷಣಾರ್ಧದಲ್ಲಿಯೇ ಆ ಬೈರಾಗಿಯು ಕಾಣದಂತಾದನು ಆ ಹುಡಿಗೆಯು ಹುಚ್ಚಿಯಂತೆ ಅವನ ಕಡೆಗೆ ನೋಡುತ್ತ ನಿಂತಳು. ಅಷ್ಟರಲ್ಲಿ ಎದುರಿಗೆ ಬರುತ್ತಿರುವ ಒಂದು ವ್ಯಕ್ತಿಯ ಕಡೆಗೆ ಅವಳ ದೃಷ್ಟಿಯು ಹೋಗಿ, ಅಗೋ! ಅಣ್ಣನು ಬಂದನು, ಎಂಬ ಸ್ವಾಭಾವಿಕ ಉದ್ಗಾರಗಳು ಅವಳ ಬಾಯಿಂದ ಹೊರಬಿದ್ದವು! ಅವಳು ಗಕ್ಕನೆ ಹಿಂದಿರುಗಿ ಮನೆಯೊಳಗೆ ಹೋಗತೊಡಗಿದಳು. ಬೈರಾಗಿಯು ಸುರುವಿದ ಅಕ್ಕಿಗಳು ಬಾಗಿಲದೊಳಮುಗ್ಗಲಿಗೇ ಬಿದ್ದಿದ್ದವು. ಅದರಿಂದ ಒಳಗೆ ಹೋಗುವ ಭರದಲ್ಲಿ ಅವಳು ಸಹಜವಾಗಿ ಅಕ್ಕಿಯ ಮೇಲೆ ಕಾಲಿಟ್ಟಳು. ಆಗ್ಗ ಅವಳು ಕೆಳಗೆ ಬಾಗಿ ನೋಡಲು ಅಕ್ಕಿ ಬಿದ್ದದ್ದನ್ನು ಕಂಡು ಕ್ಷಣಹೊತ್ತು ಗೊಂದಲದಲ್ಲಿ ಬಿದ್ದಳು; ಅದರೆ ಕೂಡಲೆ ಅವಳು ಹಿಂತಿರುಗಿ ನೋಡಲು, ಅಣ್ಣನು ಇನ್ನೂ ದೂರ ಬರುತ್ತಲಿದ್ದನು. ಅವನು ಬರುವಷ್ಟರಲ್ಲಿಯೆ ಅಕ್ಕಿಯನ್ನು ಒಳಗೆ ಒಯ್ಯಬಹುದೆಂದು ನೆನಿಸಿ, ಅವಳು ಕೆಳಗೆ ಕುಳಿತು ತಾನು ಉಟ್ಟ ಪರಕಾರದಲ್ಲಿ ಬಡಬಡ ಅಕ್ಕಿಯನ್ನು ತುಂಬಹತ್ತಿದಳು. ಆದರೂ ಕೆಲವು ಕಾಳುಗಳು ನೆಲದ ಮೇಲೆ ಉಳಿದವು! ಅವುಗಳನ್ನು ಆರಿಸಿಕೊಳ್ಳುವಾಗ್ಗ ಅವಳು ಒಂದೆರಡುಸಾರೆ ಹಿಂದಕ್ಕೆ ಹೊರಳಿ ನೋಡಿದಳು. ಆ ಮೇಲೆ ಅವಳು ಲಗುಬಗೆಯಿಂದೆದ್ದು ಒಳಗೆ ಹೋದಳು. ಸ್ವಲ್ಪಹೊತ್ತಿನ ಮೇಲೆ ಅವಳ ಅಣ್ಣನು ಮನೆಯ ಸಮೀಪಕ್ಕೆ ಬಂದನು ಇಷ್ಟರಲ್ಲಿಯೇ ಆ ಹುಡಿಗೆಯು ಮತ್ತೆ ಹೊರಗೆ ಬಂದಳು. ಆಗ ಅಕೆಯ ಕೈಯಲ್ಲಿ ಒಂದು ಪತ್ರವಿತ್ತು.

"ಅಣ್ಣಾ ಈ ಪತ್ರವು ಕೃಷ್ಣಕ್ಕನ ಕಡೆಯಿಂದ ಬಂದಿದೆ"

ಅಣ್ಣನು ಮನೆಯಲ್ಲಿ ಕಾಲಿಟ್ಟಕೂಡಲೆ ಆತನ ಮುಂದೆ ಪತ್ರಹಿಡಿದು, ಹುಡಿಗೆಯು ಹೀಗೆ ನುಡಿದಳು.

"ಕೃಷ್ಣಕ್ಕನು ಬಾಣಂತಿಯಾದಂತೆ ತೋರುತ್ತದೆ!" ಹೀಗೆಂದು, ಅವನು ಆ ಪತ್ರವನ್ನು ಒಡೆದು ಅಲ್ಲಿಯೇ ನಿಂತುಕೊಂಡು ಓದಹತ್ತಿದನು. ಹುಡಿಗೆಯಾದರೂ ಅವನ ಬಳಿಯಲ್ಲಿ ನಿಂತು ಅತಿ ಲವಲವಿಕೆಯಿಂದ ಅವನ ಮೋರೆಯ ಕಡೆಗೆ ನೋಡಹತ್ತಿದಳು. ಪತ್ರ ಓದುವದನ್ನು ಮುಗಿಸಿದ ಕೂಡಲೆ ಹುಡುಗನ ಮೋರೆಯ ಕಳೆಯು ಬದಲಾಯಿತು. ಅದು ಗಂಭೀರತನವನ್ನು ಧರಿಸಿತು ಆ ಹುಡಿಗೆಯಾದರೂ ಪತ್ರದೊಳಗೆ ಏನು ಬರೆದಿರುವರೆಂಬದರ ಬಗ್ಗೆ ಅತ್ಯಾತುರಳಾಗಿದ್ದದರಿಂದ, ಪತ್ರ ಓದುವದಾದ ಕೂಡಲೆ ಅದರ ಸಂಗತಿಯನ್ನು ಅಣ್ಣನು ತನಗೆ ತಿಳಿಸುವನೆಂದು ಅವಳು ನಂಬಿದ್ದಳು; ಆದರೆ ಆ ಹುಡುಗನು ಪಿಟ್ಟೆಂದು ಮಾತನಾಡದೆ ಸುಮ್ಮನೆ ಮನೆಯ ಒಳಗೆ ಹೋದನು. ಅಲ್ಲಿ ಒಂದು ಮೂಲೆಯೊಳಗೆ ಹೊರಸಿನ ಮೇಲೆ ಒಬ್ಬ ಹೆಂಗಸು ನಿದ್ದೆ ಹತ್ತಿ ಮಲಗಿದ್ದಳು. ಅವಳು ಸುಮಾರು ನಾಲ್ವತ್ತು ವರ್ಷದವಳಿದ್ದು, ಎಷ್ಟೋ ವರ್ಷಗಳ ವರೆಗೆ ಬೇನೆಬಿದ್ದು ಹಾಸಿಗೆ ಹಿಡಿದಿದ್ದಳು. ಅವಳು ಮಲಗಿದ ಕೋಣೆಯು ಚಿಕ್ಕದೂ, ಕತ್ತಲೆಯುಳ್ಳದ್ದೂ ಇದ್ದು, ಅದರ ಒಂದು ಮೂಲೆಯಲ್ಲಿ ಅವಳು ಮಲಗಿದ್ದಳು. ಇನ್ನೊಂದು ಮೂಲೆಯಲ್ಲಿ ಎರಡು ಹಾಸಿಗೆಯ ಸುರುಳಿಗಳೂ, ಅದರ ಹತ್ತರವೇ ಒಂದು ಪೆಟ್ಟಿಗೆಯೂ ಇದ್ದವು. ನೆಲದ ಮೇಲೆ ಒಂದು ಹರಕು ಜಮಖಾನೆಯನ್ನು ಹಾಸಿದ್ದರು ಒಂದು ಭಾಗದ ಗೋಡೆಯಲ್ಲಿ ನಾಲ್ಕು ಗೂಟಗಳಿದ್ದು, ನಡುವಿನ ಗೂಟದ ಮೇಲೆ ಕೆಲವು ಅರಿವೆಗಳನ್ನು ತೂಗಹಾಕಿದ್ದರು; ಮತ್ತು ಮೊದಲನೆಯ ಹಾಗೂ ಕಡೆಯ ಗೂಟಗಳಿಗೆ ಒಂದು ಹಗ್ಗವನ್ನು ಕಟ್ಟಿ ಅದರ ಮೇಲೆ ಒಂದು ಪರಕಾರ, ಕುಪ್ಪುಸ ಮತ್ತು

ತೆಳ್ಳಗಿನ ಮಡಿಸೀರೆ ಇವುಗಳನ್ನು ಒಣಗು ಹಾಕಿದ್ದರು. ಆ ಕೋಣೆಗೆ ಹೊಂದಿಯೇ ಮತ್ತೊಂದು ಸಣ್ಣ ಕೋಣೆಯಿತ್ತು. ಆ ಕೋಣೆ ಯೊಳಗಿನ ಒಂದು ಮೂಲೆಯಲ್ಲಿ ಬಚ್ಚಲವಿದ್ದು, ಅದರೊಳಗೆ ಒಂದು ನಳವಿತ್ತು. ಮತ್ತೊಂದು ಮೂಲೆಯೊಳಗೆ ಒಂದು ಒಲೆ ಯಿತ್ತು. ಒಲೆಯ ಬದಿಯಲ್ಲಿ ಒಂದು ಹಂಡೆಯೂ, ಕೆಲವು ಪಾತ್ರೆ ಗಳೂ ಇದ್ದವು. ಮಗ್ಗಲಿನ ಗೋಡೆಯೊಳಗೆ ಒಂದು ಕಪಾಟವಿತ್ತು; ಮತ್ತು ಮೇಲ್ಭಾಗದಲ್ಲಿ ಒಂದು ಹಲಿಗೆಯನ್ನು ಹೊಡೆದು ಅದರ ಮೇಲೆ ಕಟ್ಟಿಗೆಯನ್ನು ಒಟ್ಟುವದಕ್ಕೆ ಸ್ಥಳ ಮಾಡಿದ್ದರು. ಇರಲಿ.

ಆ ಹುಡುಗನು ಕೈಯಲ್ಲಿ ಪತ್ರವನ್ನು ಹಿಡಕೊಂಡು ಕೋಣೆ ಯೊಳಗೆ ಹೋದ ಕೂಡಲೆ ಹೊರಸಿನ ಮೇಲೆ ಮಲಗಿದ ಆ ಸ್ತ್ರೀಯು ತಗ್ಗಿದ ಧ್ವನಿಯಿಂದ:—"ಅಳಿಯಂದಿರು ಏನೆಂದು ಪತ್ರ ಬರೆದಿರುವರು? ಕೃಷ್ಣೆಯು ಹಡೆದಿರುವಳೇನು? ಎಂದು ಕೇಳಿದಳು.

"ಛೇ! ಇಲ್ಲ; ಶ್ರೀಪತರಾಯರು ಕೃಷ್ಣೆಯನ್ನು ಕರಕೊಂಡು ಹೋಗಲಿಕ್ಕೆ ಬಾ, ಎಂದು ಪತ್ರದಲ್ಲಿ ಬರೆದಿದ್ದಾರೆ"

"ಅಂದರೇನು?"

"ಅವರಿಗೆ ಅಲೀಬಾಗದ ಮುನಸೀಫ ಕೋರ್ಟಿಗೆ ಒಮ್ಮಿಂ ದೊಮ್ಮೆ ವರ್ಗವಾದ್ದರಿಂದ ಹೀಗೆ ಬರೆದಿರುವರು"

"ಹಾಗಾದರೆ ಕೃಷ್ಣೆಯ ಬಾಣಂತಿತನದ ಗತಿಯೇನು?"

"ಅದರ ಸಲುವಾಗಿಯೇ ಅವಳನ್ನು ಕರಕೊಂಡು ಹೋಗಲಿಕ್ಕೆ ಬರಬೇಕೆಂದು ಅವರು ನನಗೆ ಪತ್ರ ಬರೆದಿದ್ದಾರೆ"

ಕ್ಷಣ ಹೊತ್ತಿನವರೆಗೆ ವಿಚಾರಮಾಡಿ ಆ ಸ್ತ್ರೀಯು— "ಆ ಪತ್ರವನ್ನೇ ಇನ್ನೊಮ್ಮೆ ಓದು. ಅಂದರೆ ನನಗೆ ಎಲ್ಲಾ ತಿಳಿಯು ವದು." ಎಂದು ಅಂದ ಕೂಡಲೆ ಹುಡುಗನು ಪತ್ರವನ್ನು ಓದ ಲಾರಂಭಿಸಿದನು.

"ಪನವೇಲ, ತಾ|| ೨ಲನೇ ಮೇ ೧೯೨೬.

ಚಿ|| ಸದಾಶಿವನಿಗೆ— ಪ್ರೇಮಪೂರ್ವಕ ಅನೇಕ ಆಶೀರ್ವಾದಗಳು. ಈಗ ಪತ್ರಬರೆಯಲು ಕಾರಣವೇನಂದರೆ, ಬರುವ ೧ನೇ ತಾರೀಖಿನಿಂದ ೫ ರೂಪಾಯಿ ಹೆಚ್ಚಿಗೆ ತಲುಬಿನ ಮೇಲೆ ನನಗೆ ಅಲೀಬಾಗದ ಮುನಸೀಫಕೋರ್ಟಿಗೆ ವರ್ಗವಾಗಿರುತ್ತದೆ. ಆದರ ದೆಸೆಯಿಂದ ನಾನು ಬಹಳ ಚಿಂತೆಯಲ್ಲಿದ್ದೇನೆ. ಇಲ್ಲಿ ನಾನು ಸೌ||ವತಿಯ ಬಾಣಂತಿತನದ ಸಲುವಾಗಿ ಸರ್ವ ವ್ಯವಸ್ಥೆಯನ್ನೂ ಮಾಡಿದ್ದೆನು. ಇಲ್ಲಿಯ ಶಿರಸ್ತೇದಾರರ ಕುಟುಂಬ ಸೌ|| ಸಾವಿತ್ರೀಬಾಯಿಯವರು ಸೌ||ವತಿಯ ಬಾಣಂತಿತನದಲ್ಲಿ ಎಲ್ಲ ತರದ ಅನುಕೂಲತೆಯನ್ನೂ ಮಾಡಿಕೊಡುವೆವೆಂದು ಹಿಪ್ಪಿಕೊಂಡಿದ್ದರು; ಮತ್ತು ನಾನಾದರೂ ಅವರ ಧೈರ್ಯದ ಮೇಲೆಯೇ ನಿಂತಿದ್ದೆನು; ಆದರೆ ನನಗೆ ಹೀಗೆ ಹಿಮ್ಮೊಂದೊಮ್ಮೆ ವರ್ಗವಾದ್ದರಿಂದ ಅತಿ ಚಿಂತೆಯಲ್ಲಿ ಬಿದ್ದಿದ್ದೇನೆ. ನಾವು ಅಲ್ಲಿಗೆ ಹೋದ ಮೇಲೆ ಹೊಸ ಮನೆಯನ್ನು ಹುಡುಕಬೇಕಾಗುವದು ಇದಲ್ಲದೆ ಅಲ್ಲಿ ನಮ್ಮ ಗುರುತಿನವರು ಯಾರೂ ಇಲ್ಲ; ಆದ್ದರಿಂದ ಅಂಥ ಹೊಸ ಸ್ಥಳದಲ್ಲಿ ಸೌ||ವತಿಯ ಬಾಣಂತಿತನದ ವ್ಯವಸ್ಥೆಯಾಗುವದೆಂದರೆ ಪರಮಪ್ರಯಾಸವಾಗಿದೆ ಹೀಗೆ ಅತಿ ಅಡಚಣೆಯಲ್ಲಿದ್ದದರಿಂದ ನಿರ್ವಾಹವಿಲ್ಲದೆ ನಿನಗೆ ಪತ್ರಬರೆಯಬೇಕಾಯಿತು. ನೀನು ಈ ಪತ್ರ ಕಂಡ ಕೂಡಲೆ ಇತ್ತಕಡೆಗೆ ಹೊರಟು ಬಂದು ನಿನ್ನ ಭಗಿನಿಯನ್ನು ಕರೆದುಕೊಂಡು ಹೋಗು. ನಿಮ್ಮ ಸ್ಥಿತಿಗತಿಯೂದರೂ ನನಗೆ ಪೂರಾ ಗೊತ್ತುಂಟು. ಅವಳ ಬಾಣಂತಿತನದ ದೆಸೆಯಿಂದ ನಾನು ನಿಮ್ಮಮೇಲೆ ಹಿಂದು ಪೈಯ ಖರ್ಚನ್ನಾದರೂ ಹಾಕಲಿಕ್ಕಿಲ್ಲ.

ತೀ|| ಅತ್ತೆಯವರಿಗೆ ನನ್ನ ಶಿ|| ಸಾ|| ನಮಸ್ಕಾರಗಳನ್ನೂ ಮತ್ತು ಚಿ|| ಸಾವಿತ್ರಿಗೆ ನನ್ನ ಆಶಿರ್ವಾದಗಳನ್ನೂ ಹೇಳು. ಇತಿ

ನಿಮ್ಮ ಶ್ರೀಪತಿ ಗಂಗಾಧರ,

ಓದುವದು ಮುಗಿದ ಕೂಡಲೆ ಸಾವಿತ್ರಿಯು: "ಅಣ್ಣಾ, ಹಾಗಾದರೆ ನೀನು ಅಕ್ಕನನ್ನು ಕರೆಯಲಿಕ್ಕೆ ಹೋಗಲೇ ಬೇಕಲ್ಲವೆ? ಅವ್ವಾ, ಅಕ್ಕನ ಬಾಣಂತಿತನವು ಇಲ್ಲಿಯೇ ಆಗುವದಲ್ಲವೆ? ಅವ್ವಾ, ಅಕ್ಕನ ಕೂಸಿಗೆ ನಾನಂತೂ 'ಆನಂದ'ನೆಂದು ಹೆಸರನ್ನಿಡುವೆನು."

ಇದಕ್ಕೆ ಆ ಸ್ತ್ರೀಯು ಏನೂ ಉತ್ತರ ಕೊಡಲಿಲ್ಲ. ಕ್ಷಣ ಹೊತ್ತಿನ ಮೇಲೆ ಅವಳು ತನ್ನ ಮಗನಿಗೆ:--ಹಾಗಾದರೆ ಸದಾಶಿವ, ಏನು ವಿಚಾರ ನಡೆಸಿರುವಿ? ಅಲ್ಲಿ ಈ ಬಗೆಯು ಅಡಚಣೆಯಿದ್ದ ಮೇಲೆ ಕೃಷ್ಣೆಯನ್ನು ಇಲ್ಲಿಗೆ ಕರೆದುಕೊಂಡು ಬರಲಿಕ್ಕೇ ಬೇಕಲ್ಲವೆ?

"ಹೌದು, ಅದಂತೂ ಸರಿಯೇ! ನಾನು ನಾಳಿನ ಬೋಟಿಗೆ ಹೊರಡಲಿಕ್ಕೇ ಬೇಕು; ಆದರೆ ಹೋಗುವದು ಹೇಗೆ? ತಿಕೀಟಿಗೆ ರೊಕ್ಕ!"

ಆ ಹುಡುಗನ ಮಾತಿಗೆ ಆ ತಾಯಿಯು ಏನು ಉತ್ತರ ಕೊಟ್ಟಾಳು? ತನ್ನ ಮನೆಯ ಸ್ಥಿತಿಯು ಅವಳಿಗೆ ಚನ್ನಾಗಿಯೇ ಗೊತ್ತಿತ್ತು. ಎಷ್ಟೋ ಹೊತ್ತಿನ ವರೆಗೆ ಏನೂ ಮಾತಾಡಲಿಲ್ಲ ಕಡೆಗೆ ಸದಾಶಿವನು ದುಃಖಿತಸ್ವರದಿಂದ:--"ಮೊನ್ನೆ ಅರ್ಜಿಯನ್ನು ಮಾಡಿದ ಜಾಗೆಯ ದೆಸೆಯಿಂದ ಹೋಗಿದ್ದೆನು; ಆದರೆ ಅದಾದರೂ ತುಂಬಿ ಹೋಗಿದೆ. ಇನ್ನು ನಾನು ಪ್ರಯತ್ನವನ್ನಾದರೂ ಎಲ್ಲಿ ಮಾಡಲಿ? ಈವೊತ್ತು ನನಗೆ ಆ ನೌಕರಿ ಸಿಕ್ಕೀತೆಂಬ ಆಶೆಯು ಬಹಳ ವಿತ್ತು; ಆದರೆ ನನ್ನ ಹಣೇಬರಹದಲ್ಲಿ ಬರೆದಿರಬೇಕಲ್ಲವೇ? ಮಾಸ್ತರರ ಮನೆಗಿಷ್ಟು ಹೋಗಿಬರುವೆನು." ಎಂದು ಅಂದನು.

ಇದಕ್ಕೆ ಆ ಸ್ತ್ರೀಯು ಶೂನ್ಯಮನಸ್ಸಿನಿಂದ: "ಯಾತಕ್ಕಪ್ಪಾ?" ಎಂದಳು.

"ಅವರು ನಿನ್ನೆನಿಂದ ಜಡ್ಡಾಗಿ ಮಲಗಿರುವರು. ಅದ್ದರಿಂದ ಅವರ ಪ್ರೈಯಲ್ಲಿ ಈಗ್ಗೆ ಹೇಗೆ ಇದೆಯೆಂದು ಕೇಳಿ, ಅವರಿಗೆ ಈ ಎಲ್ಲ

ಸಂಗತಿಯನ್ನು ಹೇಳುವೆನು; ಮತ್ತು ಸಂಜೆಯ ಅಡಿಗೆಗೆ ಸ್ವಲ್ಪ ಅಕ್ಕಿಯನ್ನೂ ಬೇಳೆಯನ್ನೂ....'' ಇಷ್ಟರಲ್ಲಿಯೇ ಸಾವಿತ್ರಿಯು: ಅಣ್ಣಾ, ಮನೆಯಲ್ಲಿ ಅಕ್ಕಿ ಇವೆ. ಆ—ಆಗಳೇ ಒಬ್ಬ—ಎಂದು ಏನೋ ತಡವರಿಸುತ್ತ ಮಾತನಾಡಿದಳು.

''ಅಕ್ಕಿ ಇರುವವೇ? ಹಾಗಾದರೆ ಮುಂಜಾನೆ ಇಲ್ಲವೆಂದು ಏಕೆ ಹೇಳಿದೆ?''

''ಹೌದು, ಆಗ ಇದ್ದಿದ್ದಿಲ್ಲ; ಆದರೆ ಆಗಲೆ ನೀನು ಬರುವದಕ್ಕಿಂತ ಮೊದಲು ಒಬ್ಬ ಬೈರಾಗಿಯು ಬಂದಿದ್ದನು.''

''ಹಿಳ್ಳೇದು ಮುಂದೆ? ಅವನು ಕೊಟ್ಟನೇನು?''

''ಹೌದು''

''ಬೈರಾಗಿಯು ಅಕ್ಕಿಯನ್ನು ಕೊಟ್ಟನೆ!'' ಎಂದು ಸದಾಶಿವನು ಮತ್ತೆ ಆಶ್ಚರ್ಯದಿಂದ ನುಡಿದನು.

''ಹೌದು. ಅವನು ನನಗೆ ಭಿಕ್ಷೆಯನ್ನು ಬೇಡಿದನು ಆಗ್ಗ ನಾನು ಅವನಿಗೆ ಮುಂದಕ್ಕೆ ಸಾಗಲಿಕ್ಕೆ ಹೇಳಿದೆನು; ಆದರೆ ಅವನು ದಿನಾಲು ಐದೇ ಮನೆಗೆ ಭಿಕ್ಷೆ ಬೇಡುವಂಥ ವ್ರತಸ್ಥ ಬೈರಾಗಿಯಾಗಿದ್ದನು; ಮತ್ತು ನಮ್ಮದೇ ಅವನಿಗೆ ಕಡೆಯ ಮನೆಯ ಭಿಕ್ಷೆಯಾಗಿತ್ತು. ಕಡೆಗೆ ಅವನು ಒಂದೆರಡು ಕಾಳನ್ನಾದರೂ ಭಿಕ್ಷೆ ಹಾಕಿ ಕಳಿಸೆಂದನು. ಆಗ ನಾನು ನಿರುಪಾಯದಿಂದ-''ನಮ್ಮ ಮನೆಯಲ್ಲಿ ಒಂದು ಒಡಕ ಕಾಳು ಕೂಡಾ ಉಳಿದಿಲ್ಲವಪ್ಪಾ'' ಎಂದು ಹೇಳಿದೆನು. ಆಗ ಅವನಿಗೆ ಏನು ಅನಿಸಿತೋ-ದೇವರೇ ಬಲ್ಲ! ಅವನು ಒಂದು ನಿಮಿಷದ ವರೆಗೆ ನನ್ನ ಕಡೆಗೆ ನೋಡಿ, ತನ್ನ ಜೋಳಿಗೆಯೊಳಗಿನ ಎಲ್ಲ ಅಕ್ಕಿಯನ್ನೂ ನನ್ನ ಮುಂದೆ ಸುರುವಿದನು. ನಾನು ಬೇಡ-ಬೇಡವೆಂದು ಎಷ್ಟು ಪರಿಯಿಂದಹೇಳಿದರೂ, ಅವನು ನನ್ನ ಮಾತಿನ ಕಡೆಗೆ ಕಿವಿಗೊಡದೆ ಹಾಗೆಯೇ ಹೊರಟು ಹೋದನು.

"ಹಾಗಾದರೆ ನಾನು ಮನೆಗೆ ಬರುವ ಹಾದಿಯಲ್ಲಿ ನನಗೆ ಒಬ್ಬ ಬೈರಾಗಿಯು ಭೆಟ್ಟಿಯಾಗಿದ್ದು ನಿಜವು!"

"ಹಾಗಾದರೆ ಅವನೇ ಆ ಬೈರಾಗಿಯು! ಅವನು ಹೋದ ಕೂಡಲೇ ನೀನು ಬಂದೆ"

ಸಾವಿತ್ರಿಯು ಉತ್ತರವನ್ನು ಕೇಳಿ ಸದಾಶಿವನು ಕ್ಷಣಹೊತ್ತು ವಿಚಾರದಲ್ಲಿ ಬಿದ್ದನು. ತನಗೆ ದಾರಿಯಲ್ಲಿ ಭೆಟ್ಟಿಯಾದ ಬೈರಾಗಿಯು ತನ್ನ ಕಡೆಗೆ ನೋಡುತ್ತಿರುವಾಗ ತನ್ನ ಮನಸ್ಸಿನಲ್ಲಿ ಏನೋ ಚಮತ್ಕಾರದ ಭಾವನೆಯಾದದ್ದು ಈಗ ಅವನಿಗೆ ನೆನಪಾಗಿ ಬಂತು. ಆಗ ಅವನು ತನ್ನ ತಾಯಿಯ ಕಡೆಗೆ ನೋಡಿ:- ಅವ್ವಾ, ಆ ಬೈರಾಗಿಯು ನನ್ನ ಎಡಮಗ್ಗಲಿನಿಂದ ಹಾದು ಹೋದನು. ಆಗ ಅವನು ಒಂದೇಸವನೆ ನನ್ನ ಮುಖದ ಕಡೆಗೆ ನೋಡುತ್ತಿದ್ದನು ನನ್ನ ಮನಸ್ಸಿಗೆ ಏನೇನೋ ಅನಿಸಿತು. ಅವನು ಮುಂದೆ ಹೊರಟು ಹೋದ ಮೇಲೆ ನಾನು ಬೇಕಂತ ಹಿಂದಿರುಗಿ ನೋಡಿದೆನು. ಅವನು ಬೈನದ ಒಂದು ಮಗ್ಗಲಿಗೆ ನನ್ನನ್ನೇ ನೋಡುತ್ತ ನಿಂತದ್ದು ನನ್ನ ದೃಷ್ಟಿಗೆ ಬಿತ್ತು" ಎಂದು ನುಡಿದು, ಸಾವಿತ್ರಿಯ ಕಡೆಗೆ ನೋಗದಿರುವಿ:—"ತಂಗೀ, ಆ ಅಕ್ಕಿ ಎಷ್ಟು ಇರುವವು?" ಎಂದು ಕೇಳಿದನು. ಅದಕ್ಕವಳು: "ನಾಲ್ಕಾರು ದಿನಗಳ ವರೆಗೆ ಆಗುವಷ್ಟು ಇದ್ದಾವು" ಎಂದು ಅಂದಳು.

ಅದನ್ನು ಕೇಳಿ ಸದಾಶಿವನ ಮನಸ್ಸಿನಲ್ಲಿ ಆ ಬೈರಾಗಿಯ ವಿಷಯವಾಗಿ ಪೂಜ್ಯಭಾವನೆಯುಂಟಾಯಿತು. ಆ ವೇಳೆಯಲ್ಲಿ ಅವನ ಮನದಲ್ಲಿ ನಾನಾ ತರದ ವಿಚಾರಗಳು ಬಂದು ಹೋದವು. ಇಂದು ಮನೆಯಲ್ಲಿ ಒಂದು ಕಾಳು ಸಹ ಇದ್ದಿಲ್ಲ. ಕಿಸೆಯಲ್ಲಿ ಒಂದು ಕವಡಿ ಕೂಡಾ ಇದ್ದಿಲ್ಲ. ಇಂಥ ಕಷ್ಟಕಾಲದಲ್ಲಿ ದೇವರೇ ಬೈರಾಗಿಯ ರೂಪ ತಾಳಿ ತನಗೆ ಸಹಾಯ ಮಾಡಿದನೆಂದು ಅವನಿಗೆ ಅನಿ

ಸಿತು. ಕ್ಷಣಹೊತ್ತಿನ ವರೆಗೆ ಅವನ ಮನಸ್ಸು ಭಗವತ್‌ಚಿಂತನೆಯಲ್ಲಿ ಮಗ್ನವಾಯಿತು. ಅಷ್ಟರಲ್ಲಿ ಅವನ ತಾಯಿಯ ಮುಖದಿಂದ: "ಅನಾಥ ರಕ್ಷಕನು ದೇವರಿದ್ದಾನೆ!" ಎಂಬ ಉದ್ಗಾರವು ಹೊರಬಿದ್ದಿತು. ತಾಯಿಯ ಶಬ್ದಗಳು ಕಿವಿಗೆ ಬಿದ್ದೊಡನೆಯೇ ಸದಾಶಿವನು ಸಿಟ್ಟಿನ ವೇಗದಿಂದ:—ಅವ್ವಾ, ಇದು ನಿಜವು! ದೇವರು ಕರುಣಾಕರನಾಗಿರುವನು. ಇದರಲ್ಲಿ ರವಷ್ಟಾದರೂ ಸಂಶಯುವಿಲ್ಲ. ನಮ್ಮಂಥ ವ್ಯಾಳಿಯೊಳಗೆ ಬಿದ್ದ ದೀನರೂ, ಅನಾಥರೂ ಆದವರ ಚಿಂತೆಯು ಕೂಡ ಅವನಿಗೆ ಉಂಟು" ಎಂದು ಅಂದನು. ಈ ಬಗೆ ... ಎಷ್ಟೋ ಹೊತ್ತಿನ ವರೆಗೆ ಅವರ ಮಾತಿನ ಓಲವು ಬಿದ್ದಿತ್ತು.

ಕೆಲಹೊತ್ತು ಬೇರೆ ಸಂಗತಿಗಳ ವಿಷಯಕ್ಕೆ ಮಾತುಗಳಾದ ಮೇಲೆ, ಆ ಹುಡುಗರ ತಾಯಿಯು: "ಒಳ್ಳೇದು. ಕೃಷ್ಣೆಯನ್ನು ಕರತರಲಿಕ್ಕೆ ಏನು ವ್ಯವಸ್ಥೆಯನ್ನು ಮಾಡತಕ್ಕದ್ದು. ಅಲ್ಲಿಗೆ ಹೋಗಬೇಕಾದರೆ ಬೋಟಿನ ಬಾಡಿಗೆ ಬೇಕು; ಮತ್ತು ಅವಳು ಇಲ್ಲಿಗೆ ಬಂದಮೇಲೆ, ಅವಳ ಔಷಧ-ಪಥ್ಯೆಯ ವಿಷಯಕ್ಕಾದರೂ ಏನು ವ್ಯವಸ್ಥೆ ಮಾಡತಕ್ಕದ್ದು?"

"ಅದರ ವಿಷಯಕ್ಕೆ ಏನೂ ಚಿಂತೆ ಮಾಡಬೇಡಿರೆಂದು ಪತ್ರದಲ್ಲಿ ಬರೆದಿದೆ. ಸದ್ಯಕ್ಕಿದ್ದ ಚಿಂತೆಯೆಂದರೆ, ಬೋಟಿನ ಬಾಡಿಗೆಯದು! ಏನಿಲ್ಲೆಂದರೂ ಎರಡು ರೂಪಾಯಿಗಳು ಬೇಕು. ನೆರೆಹೊರೆಯವರಲ್ಲಿ ಸಿಗುವ ಆಶೆಯಂತೂ ಇಲ್ಲವೇ ಇಲ್ಲ; ಯಾಕಂದರೆ ನಾವೆಲ್ಲರೂ ಒಂದೇ ಸರದೊಳಗಿನ ಮಣಿಗಳು! ದುಡ್ಡಿನ ಸುದ್ದಿಯು ಹೊರಟ ಕೂಡಲೆ ಆ ತಾಯಿ-ಮಕ್ಕಳು ಮತ್ತೆ ಚಿಂತಾತುರರಾದರು. ಎಂಟು-ಹತ್ತು ದಿನಗಳಿಂದ ಹತ್ತಿರ ದುಡ್ಡಿಲ್ಲದೆ ಆ ದೀನಕುಟುಂಬದವರು ತೀರ ಸ್ಥಿರಾಣಾಗಿದ್ದರು; ನೆರೆಹೊರೆಯ ಮನೆಯವರ ಕಡೆ

ಯಿಂದ ಅಕ್ಕಿ, ಬೇಳೆ, ಉಪ್ಪು, ಮೆಣಸಿನಕಾಯಿ ಮೊದಲಾದ ಪದಾರ್ಥಗಳನ್ನು ಕಡ ತಂದು ಹ್ಯಾಗಾದರೂ ಕಷ್ಟದಲ್ಲಿ ಕಾಲ ಕಳೆದರು; ಆದರೆ ಎಡಬಲದ ಕುಟುಂಬದವರಾದರೂ ಹೀಗೆ ಕೈಗಡವನ್ನು ಎಷ್ಟು ದಿವಸಗಳ ವರೆಗೆ ಕೊಡುತ್ತ ಬಂದಾರು? ಅವರಾದರೂ ರಟ್ಟೆಯನ್ನು ಮುರಿದು ರೊಟ್ಟಿಯನ್ನು ದೊರಕಿಸುವಂಥ ಸ್ಥಿತಿಯುವರೇ ಇದ್ದರು! ಇರಲಿ. ಕೆಲ ಹೊತ್ತಿನ ವರೆಗೆ ವಿಚಾರ ಮಾಡಿ ಸದಾಶಿವನು ತನ್ನ ತಾಯಿಯ ಕಡೆಗೆ ತಿರುಗಿ: ‟ಅವ್ವಾ, ನಾನು ಈಗ ಮಾಸ್ತರರ ಕಡೆಗೆ ಹೋಗಿ ಬರುವೆನು; ಮತ್ತು ಈ ಎಲ್ಲ ಸಂಗತಿಯನ್ನು ತಿಳಿಸಿ, ಈ ಪತ್ರವನ್ನಾದರೂ ತೋರಿಸುವೆನು. ಅವರು ನಮ್ಮ ಇಂಥ ಕಂಗಾಲಸ್ಥಿತಿಯಲ್ಲಿ ನಮಗೆ ನೆರವಾಗೇ ಆಗುವರೆಂದು ನನಗೆ ಪೂರ್ಣ ನಂಬಿಗೆಯುಂಟು! ಅವರು ಬಹಳ ಒಳ್ಳೆಯವರು. ನಾನು ಶಾಲೆಯನ್ನು ಬಿಡುವಾಗ್ಗೆ ಅವರಿಗೆ ಅತಿ ಕೆಡಿಸಿತು. ಅವರು ನನ ಸಲುವಾಗಿ ತಮ್ಮಿಂದಾದಷ್ಟು ಪ್ರಯತ್ನ ಮಾಡಿ ನೋಡಿದರು; ಆದರೆ ನನ್ನ ದುರ್ದೈವದಿಂದ ಅವರು ಕೈಕೊಂಡ ಕಾರ್ಯದಲ್ಲಿ ಯಶಸ್ಸು ದೊರೆಯಲಿಲ್ಲ! ಉಪಾಯವಿಲ್ಲ!! ಹೀಗೆಂದು ಸದಾಶಿವನು ಮಾಸ್ತರರ ಮನೆಗೆ ಹೋಗುವದಕ್ಕೆಂದು ಎದ್ದನು

---

## ೩ನೆಯ ಪ್ರಕರಣ.

## ಹಿಂದಿನ ಸಂಗತಿಯು.

---

ವಾಚಕರೇ! ಅತ್ಯಂತ ನಿಕೃಷ್ಟಾವಸ್ಥೆಗೆ ಮುಟ್ಟಿದ ಹಿಂದು ಬಡಕುಟುಂಬದ ವಿಷಯಕ್ಕೆ ನೀವು ಹಿಂದಿನ ಪ್ರಕರಣದಲ್ಲಿ ಸ್ವಲ್ಪ ಮಟ್ಟಿಗೆ ಓದಿದಿರಿ. ಇನ್ನು ಈ ಪ್ರಕರಣದಲ್ಲಿ ನಾವು ನಿಮಗೆ ಆ

ಕುಟುಂಬದ ಬಗ್ಗೆ ಪೂರಾ ಗುರುತು ಮಾಡಿಕೊಡೋಣ, ಅಂದರೆ ನಿಮಗೆ ಮುಂದೆ ಕಥೆಯನ್ನು ಓದುವದಕ್ಕೆ ಸುಲಭವಾಗುವದು.

ಆ ಮಾತಿಗೆ ಈಗ್ಗೆ ಹೆಚ್ಚು-ಕಡಿಮೆ ಹನ್ನೆರಡು ವರುಷಗಳಾಗುತ್ತ ಬಂದವು ಆಗ್ಗೆ ಸಾವಿತ್ರಿಯು ಕೇವಲ ಹನ್ನೆರಡು ದಿವಸದ ಕೂಸಾಗಿದ್ದಳು. ಭಾಗೀರಥೀದೇವಿಯು ತನ್ನ ಸಣ್ಣ ಕೂಸನ್ನು ತೊಡೆಯ ಮೇಲಿಟ್ಟುಕೊಟ್ಟು ಚಿಂತೆ ಮಾಡುತ್ತ ಹೊರಸಿನ ಮೇಲೆ ಕುಳಿತಿದ್ದಳು ಅವಳ ಹತ್ತರವೇ ಕೃಷ್ಣೆಯೂ, ಸದಾಶಿವನೂ, ಯಮುನೆಯೂ ತಮ್ಮ ಪುಟ್ಟತಂಗಿಯ ಕೂಡ ಆಡುತ್ತ ಕುಳಿತಿದ್ದರು ಆಗ್ಗೆ ಕೃಷ್ಣೆಗೆ ಆರು ವರ್ಷಗಳೂ, ಸದಾಶಿವನಿಗೆ ಮತ್ತು ಯಮುನೆಗೆ ಕ್ರಮವಾಗಿ ನಾಲ್ಕು ಮತ್ತು ಎರಡು ವರ್ಷಗಳೂ ಆಗಿದ್ದವು ರಾತ್ರಿಯ ಎಂಟು ಹೊಡೆದಿತ್ತು. ಆವತ್ತಿನ ದಿವಸವೇ ಕೂಸಿಗೆ ಹೆಸರಿಡುವದು ಗೊತ್ತಾಗಿತ್ತು ಕೋಣೆಯ ಒಂದು ಮೂಲೆಯೊಳಗೆ ಹಳೇ ತೊಟ್ಟಿಲವನ್ನು ಕಟ್ಟಿದ್ದರು. ಹುಡುಗರು ತಮ್ಮ ತಂದೆಯು ಬರುವ ಹಾದೀ ನೋಡುತ್ತ ಕುಳಿತಿದ್ದರು. ಅವರ ಸಲುವಾಗಿಯೇ ಆ ಕಾರ್ಯಕ್ಕೆ ಅಡ್ಡಿಯುಂಟಾಗಿದ್ದಿತು

ಇಷ್ಟರೊಳಗೆ ಒಬ್ಬ ಹೆಂಗಸು ಬಾಗಿಲದೊಳಗೆ ಹಣಿಕಿ ಹಾಕಿ:- "ಭಾಗೀರಥೀದೇವಿಯವರೇ, ನಿಮ್ಮ ಮನೆಯವರು ಬಂದರೇನು?" ಎಂದು ಕೇಳಿದಳು.

"ಇಲ್ಲರೀ ಗೋಪಿಕಾಬಾಯಿಯವರೇ, ನಮ್ಮ ಮನೆಯವರು ಬರುವವರಿದ್ದಾರೆ! ನಾನು ಅವರು (ಯಜಮಾನರು) ಬರುವದಿಂದೇ ದಾರೀ ನೋಡುತ್ತ ಕುಳಿತಿದ್ದೇನೆ"

"ಹೂ, ಆಗಲಿ! ನಿಮ್ಮದೆಲ್ಲ ಸಿದ್ಧತೆಯಾದ ಮೇಲೆ ನನಗೆ ಹೇಳಿ ಕಳಿಸಿರಿ. ನಾನು ತೊಟ್ಟಿಲ ಅಲ್ಲಾಡಿಸಿ ಹೆಸರಿಡುವೆನು" ಹೀಗೆಂದು ಅವಳು ಹೊರಟು ಹೋದಳು.

ಮುಂಬೈ ಪಟ್ಟಣದೊಳಗಿನ ಮುಗಭಾಟದಲ್ಲಿ "ಶಾಂತಾರಾಮನ ಬೀದಿ" ಎಂಬ ಹೆಸರಿನ ಓಣಿಯಲ್ಲಿ ಮೇಲೆ ಹೇಳಿದ ಕುಟುಂಬದವರು ವಾಸಮಾಡಿಕೊಂಡಿದ್ದರು ಆ ಹುಡುಗರ ತಂದೆಯಾದ ಗೋವಿಂದರಾಯನು ಸಂಜೆಯ ಹೊತ್ತಿನಲ್ಲಿ ಏನೋ ಸಾಮಾನೆವನ್ನು ತರುವೆನೆಂದು ಹೇಳಿ ಪೇಟೆಗೆ ಹೋದವನು ಇನ್ನೂ ವರೆಗೆ ತಿರುಗಿ ಬಂದಿದ್ದೇ ಇಲ್ಲ. ಹುಡುಗರ ಹುರುಪಂತೂ ಹಿಡಿಸಲಳವಲ್ಲ! ತಮ್ಮ ಸಣ್ಣ ತಂಗಿಯನು ತೊಟ್ಟಿಲದಲ್ಲಿ ಹಾಕುವರೆಂಬ ಸಂಭ್ರಮದಿಂದ ಅವರೆಲ್ಲರೂ ಇಷ್ಟು ಹೊತ್ತಿನ ತನಕ ನಿದ್ರೆ ಕಟ್ಟಿಕೊಂಡು ಕುಳಿತಿದ್ದರು. ಅವರ ಊಟವು ಇನ್ನೂ ಆಗಿದ್ದಿಲ್ಲ. ಅಪ್ಪನು ಬಂದ ಮೇಲೆ ಕೂಸನ್ನು ತೊಟ್ಟಿಲಲ್ಲಿ ಹಾಕುವದಾದಮೇಲೆ ಊಟ ಮಾಡುವೆವೆಂದು ಹಟ ಹಿಡಿದು ಆ ಹುಡುಗರು ಹಾಗೆಯೇ ಕುಳಿತಿದ್ದರು. ರಾತ್ರಿಯು ಹೆಚ್ಚಿದಂತೆ ಹುಡುಗರು ತೂಕಡಿಸಹತ್ತಿದರು ಅವರು ತಮ್ಮ ತಾಯಿಗೆ:—"ಅವ್ವಾ, ಅಪ್ಪನು ಇನ್ನೂ ವರೆಗೆ ಏಕೆ ಬರಲಿಲ್ಲ?" ಎಂದು ಆಗಾಗ್ಗೆ ಪ್ರಶ್ನೆ ಮಾಡುತ್ತಿದ್ದರು ಕಡೆಗೆ ಹತ್ತು ಗಂಟೆ ರಾತ್ರಿಯಾಗಲಿಕ್ಕೆ ಬಂತು; ಆಗ ಭಾಗೀರಥೀದೇವಿಯು:—"ಕೃಷ್ಣಾ, ಅವರು (ಯಜಮಾನರು) ಯಾವಾಗ ಬರುವರೋ ಬರಲಿ. ನೀನು ಈ ಹುಡುಗರನ್ನು ಒಳಗೆ ಕರಕೊಂಡು ಹೋಗಿ ಅನ್ನ-ಝುಣುಕ ಊಟಕ್ಕೆ ಹಾಕಿ ಮಲಗಿಸಿ ಬಿಡು. ಆ ಮೇಲೆ ನಮ್ಮ ನೆರೆಮನೆಯ ಗೋಪಿಕಾಬಾಯಿಯನ್ನು ಕರಕೊಂಡು ಬರುವೆಯಂತೆ. ಹೂ, ಬೇಗನೇ ಏಳು. ರಾತ್ರಿ ಬಹಳವಾಗಿದೆ. ಅವರೆಲ್ಲರೂ ತಮ್ಮ ಮನೆಯಲ್ಲಿ ಮಲಗಿಬಿಟ್ಟಾರು." ಎಂದು ಅಂದಳು.

"ಸದೂ, ಏಳಪ್ಪಾ. ಯಮುನಾ, ಏಳು ಬಾಳಾ" ಎಂದು ತನ್ನ ತಾಯಿಯು ತೊಡೆಯ ಹತ್ತರ ಮಲಗಿದ ಎರಡೂ ಹುಡುಗರನ್ನು ಕೃಷ್ಣೆಯು ಒಳಗೆ ಕರಕೊಂಡು ಹೋದಳು.

ಭಾಗೀರಥೀದೇವಿಯು ಶೂನ್ಯದೃಷ್ಟಿಯಿಂದ ತನ್ನ ಮಕ್ಕಳ ಕಡೆಗೆ ನೋಡುತ್ತಿದ್ದಳು. ಅವಳ ಮನಸ್ಸಿನಲ್ಲಿ ಎಷ್ಟೋ ವಿಚಾರಗಳು ಉತ್ಪನ್ನವಾದವು. ಇತ್ತಿತ್ತಲಾಗಿ ಪತಿಯು ಮನಸ್ಸು ಸ್ಥಿರವಿಲ್ಲೆಂಬದು ಅವಳಿಗೆ ಗೊತ್ತಾಗಿತ್ತು. ಎರಡು ವರ್ಷಗಳಿಂದ ನೌಕರಿಯು ಇಲ್ಲದ್ದರಿಂದ ಅವನ ಸ್ಥಿತಿಯು ಹೀಗಾಗಿರಬಹುದೆಂದು ಊಹಿಸಿ, ಅವಳು ಈ ವಿಷಯದಲ್ಲಿ ಅವನ ಮುಂದೆ ಹಿಂದೆ ಅನೇಕಸಾರೆ ಮಾತು ತೆಗೆದಿದ್ದಳು; ಆದರೆ ಅದರಿಂದ ಅವಳಿಗೆ ಸಮಾಧಾನಕರವಾದ ಉತ್ತರವು ಮಾತ್ರ ದೊರಕ್ಕಿದ್ದಿಲ್ಲ. ಕೆಲಸವಿಲ್ಲದ್ದರಿಂದ ಸಾಲವು ದಿನದಿನಕ್ಕೆ ಹೆಚ್ಚಾಗುತ್ತ ನಡೆಯಿತು ಮನೆಯು ಬಾಡಿಗೆಯಾದರೂ ಏರಹತ್ತಿತು ಹೀಗಿರಲು ನಾಲ್ಕು ದಿನಗಳ ಹಿಂದೆ ಮಾರವಾಡಿಯು ಮನೆಮುಟ್ಟ ಬಂದು ರಗಳೆಯನ್ನು ಮಾಡಿ ಹೋಗಲು, 'ಬೇಜಾರ ಬಂತಪ್ಪಾ ಇನ್ನು! ಈ ಸಂಸಾರದ ಸುಖವು ಸಾಕು! ಇನ್ನು ಎಲ್ಲಿಗಾದರೂ ಮೋರೆ ಮುಚ್ಚಿಕೊಂಡು ಹೋಗಬೇಕು!' ಎಂಬ ಪತಿಯು ಉದ್ಗಾರಗಳು ಅವಳ ಕಿವಿಗೆ ಬಿದ್ದಿದ್ದವು ಅಂದಿನಿಂದ ಅವಳಿಗೆ ಒಂದು ತರದ ಎದೆಗುದಿಕೆಯಾದಂತಾಗಿತ್ತು ಇವತ್ತಿನ ದಿವಸ ಇಷ್ಟು ರಾತ್ರಿಯಾದರೂ ಪತಿಯು ಮನೆಗೆ ಬಾರದೆ ಇದ್ದದ್ದನ್ನು ನೋಡಿ, ಅವಳ ಮನಸ್ಸಿನಲ್ಲಿ ಇಲ್ಲದ ವಿಚಾರಗಳು ಬರಹತ್ತಿದವು ಅವಳು ವಿಚಾರಮಗ್ನಳಾಗಿ ತನ್ನ ಅಂಗೈ ಮೇಲೆ ಗದ್ದವನ್ನಿಟ್ಟುಕೊಂಡು, ತೊಡೆಯ ಮೇಲೆ ನಿದ್ರೆಹತ್ತಿದ ಕೂಸಿನ ಕಡೆಗೆ ನೋಡುತ್ತ ಕುಳಿತಿದ್ದಳು. ಇಷ್ಟರೊಳಗೆ ತಲೆಬಾಗಿಲ ತೆರೆದು ಗೋಪಿಕಾಬಾಯಿಯು ಒಳಗೆ ಬಂದಳು; ಮತ್ತು "ಹೊರಗಿನಿಂದ ಬಂದರೇನು?" ಎಂದು ಕೇಳಿದಳು. "ಇನ್ನೂ ಇಲ್ಲ; ಇಂದು ಬರಲಿಕ್ಕೆ ಇಷ್ಟೇಕೆ ರಾತ್ರಿಯಾಯಿತೋ ತಿಳಿಯದಾಗಿದೆ" "ಆದರೆ ಈ ದಿನ ಕೂಸಿಗೆ ಹೆಸರಿಡಬೇಕೆಂಬದು ತಿಳಿದಿದ್ದರೂ ಏಕೆ

ಇಷ್ಟು ರಾತ್ರಿ ಮಾಡಿದ್ದಾರು?''

ಏನು ಹೇಳಲಿ! ಎಂದು ಭಾಗೀರಥೀದೇವಿಯು ದೀರ್ಘವಾದ ನಿಟ್ಟುಸಿರು ಬಿಟ್ಟಳು.

ಭಾಗೀರಥೀದೇವಿಯವರೇ, ಇವತ್ತಿನ ದಿವಸ ನೀವು ಇಷ್ಟೇಕೆ ದುಃಖಕರಾಗಿದ್ದೀರಿ? ಅವರು ಇದೇ ಈಗ ಬಂದಾರು! ಗಂಡಸರ ದೇನು ಅವರಿಗೆ ಸಾವಿರಾರು ಕಲಸಗಳಿರುತ್ತವೆ.

ಆದರೆ ನಿಜ! ನನಗೆ ಯಾಕೋ ಇತ್ತೀತ್ತಲಾಗಿ ಅವರ ವಿಷಯ ನಾನಾ ತರಹ ಆಲೋಚನೆ ಬರುತ್ತಿದೆ

ಅದ್ಯಾಕೆ?

ಎರಡು ವರ್ಷಗಳಿಂದ ಕೆಲಸವಿಲ್ಲದ್ದರಿಂದ ಅವರ ಮನಸ್ಸಿಗೆ ಶಾಂತತೆಯೇ ಇಲ್ಲದಂತಾಗಿದೆ ಮೊನ್ನಿನ ದಿವಸ ಅವರು ಹೀಗೆಯೇ ಬೇಸತ್ತು ಏನೋ ಅಭದ್ರವಾದ ಉದ್ಗಾರಗಳನ್ನು ನುಡಿದರು.

ಮನುಷ್ಯನು ಅತಿ ಬೇಸತ್ತನೆಂದರೆ ಹೀಗೆ ಆಗುವದು ಸ್ವಾಭಾವಿಕವು! ಅಲ್ಲದೆ, ನೀವು ಮೊದಲು ಧನಿಕಸ್ಥಿತಿಯಲ್ಲಿದ್ದಿರೆಂದು ಕೇಳುತ್ತೇನೆ

ಹೌದು, ಇದ್ದೆವು; ಆದರೆ ನಾನು ಮಾತ್ರ ಅದನ್ನು ಉಪಭೋಗಿಸಲಿಲ್ಲ ಹೀಗೆಂದು ಆಕೆಯು ತನ್ನ ಗಂಡನ ಹಿಂದಿನ ಎಲ್ಲ ಕಥೆಯನ್ನು ಗೋಪಿಕಾಬಾಯಿಗೆ ಹೇಳಿದಳು ಅದನ್ನು ನಮ್ಮ ವಾಚಕರಿಗಾಗಿ ಸಾರಾಂಶ ರೂಪದಿಂದ ಇಲ್ಲಿ ಕೊಡುವೆವು:—

ಗೋವಿಂದರಾಯನು ತಂದೆಗೆ ಒಬ್ಬನೇ ಮಗನಾಗಿದ್ದನು. ಹಳ್ಳಿಯಲ್ಲಿರುವ ಅವರ ಹೊಲಮನೆಯ ಉತ್ಪನ್ನವು ಸರಾಸರಿ ೫-೬ ಸಾವಿರ ರೂಪಾಯಿದ್ದಿತ್ತು. ಗೋವಿಂದರಾಯನು ಚಿಕ್ಕವನಿರುವಾಗಲೇ ಅವನ ಜನನಿಯು ತೀರಿಕೊಂಡಳು. ಮನೆಯಲ್ಲಿ ಅವನ ಸೋದರತ್ತೆಯೊಬ್ಬಳಿದ್ದಳು ಅವನ ಪ್ರಥಮ ವಿವಾಹವು ಅವನು

೧೬ ವರ್ಷದವನಿದ್ದಾಗಲೇ ಆಯಿತು. ಮುಂದೆ ಎರಡು ವರ್ಷಗಳಲ್ಲಿಯೇ ಅವರ ಊರಲ್ಲಿ ಪ್ಲೇಗಿನ ಹಾವಳಿಯಾಗಿ ಅದಕ್ಕೆ ಅವನ ತಂದೆಯೂ, ಸೋದರತ್ತೆಯೂ ಆಹುತಿಯಾದರು. ಹೀಗಾಗಿ ಪತಿ-ಪತ್ನಿಯರಿಬ್ಬರೇ ಉಳಿದರು. ಮುಂದೆ ಅವನ ಹೆಂಡತಿಯಾದರೂ ಬಹು ದಿನ ಬದುಕಿರಲಿಲ್ಲ. ಮರುವರ್ಷವೇ ಪ್ಲೇಗೆ ಮಹಾರಾಜರು ತಮ್ಮ ವರ್ಷಾಶನವನ್ನು ಸಲ್ಲಿಸಲು ಬಂದರು. ಅವರು ಬೇರೆ ದುರ್ದೈವೀ ಪ್ರಾಣಿಗಳ ಹಾಗೆ ಗೋವಿಂದರಾಯನ ಪತ್ನಿಯನ್ನೂ ದೋಚಿಕೊಂಡು ಹೋದರು. ಗೋವಿಂದರಾಯನ ಕೋಮಲವಾದ ಅಂತಃಕರಣದ ಮೇಲೆ ಇದೆಲ್ಲವೂ ಭಯಂಕರವಾಗಿ ಪರಿಣಮಿಸಿತು. ಅವರು ತಮ್ಮ ಮನೆಗೆ ಕೀಲಿಯನ್ನು ಜಡಿದು, ಮುಂಬೈ ಪಟ್ಟಣದ ಹಾದಿಯನ್ನು ಹಿಡಿದರು. ಅವರು ಇಂಗ್ರಜಿ ಆರನೇ ಇಯತ್ತೆಯ ವರೆಗೆ ಕಲಿತಿದ್ದರು. ಅವರಿಗೆ ಕೆಟ್ಟ ಜನರ ಸಂಗತಿಯು ಹತ್ತಿತು. ಆಸ್ತರಂಬ ನಾಲ್ಕಾರು ತಿಂಗಳಲ್ಲಿ ಅವರು ಸಂಗಡ ತಂದ ರೂಪಾಯಿಗಳು ಹೇಳಹೆಸರಿಲ್ಲದೆ ಹೋದವು! ಚಿಕ್ಕ ವಯಸ್ಸು, ಜಗತ್ತಿನ ಅನುಭವವಿಲ್ಲ; ಮೇಲೆ ಬುದ್ಧಿ ಹೇಳುವ ಹಿರಿಯರ ಅಭಾವ; ಕೈಯಲ್ಲಿ ಬೇಕಾದಷ್ಟು ದುಡ್ಡು, ಮೇಲೆ ದುಸ್ಸಹವಾಸ! ಅಂದ ಬಳಿಕ ಕೇಳುವದೇನು?

ಈ ಮೇರೆಗೆ ದುಸ್ಸಂಗತಿಯು ಗಂಟು ಬಿದ್ದು ನಾಲ್ಕೇ ವರ್ಷಗಳಲ್ಲಿ ಗೋವಿಂದರಾಯನು ಅನೇಕ ದುರ್ವ್ಯಸನಗಳಿಗಾಗಿ ಇದ್ದ ಬಿದ್ದ ಹೊಲಮನೆಯನ್ನೆಲ್ಲ ಮಾರಿದನು. ಈ ಎಲ್ಲ ಸಂಗತಿಯು ಅವನ ದೂರಿನವನಾದ ಒಬ್ಬ ಆಪ್ತನಿಗೆ ತಿಳಿದ ಕೂಡಲೆ ಅವನಿಗೆ ಬಹಳ ಕೆಡುಕೆನಿಸಿತು. ಅವನು ಕೂಡಲೆ ಮುಂಬೈಗೆ ಬಂದು ಗೋವಿಂದರಾಯನಿಗೆ ಭೆಟ್ಟಿಯಾದನು; ಮತ್ತು ಅವನಿಗೆ ನಾಲ್ಕು ಹಿತದ ಮಾತುಗಳನ್ನು ಹೇಳಿ. ದಿನಾಲು ಸಂಭವಿಸುತ್ತಿರುವ ಉದಾ

ಹರಣೆಗಳನ್ನು ಕೊಟ್ಟು ಅವನ ಮನಸ್ಸನ್ನು ಯೋಗ್ಯ ಪಥಕ್ಕೆ ಹಚ್ಚಿದನು

ಅವನ ಇಂದಿನ ವರೆಗಿನ ಆಚರಣೆಯನ್ನು ನೋಡಿದರೆ ಅವನು ಇಷ್ಟು ತೀವ್ರವಾಗಿ ಕಣ್ಣು ತೆರೆದಾನೆಂಬುವದು ನಂಬಿಗೆಯಿರಲಿಲ್ಲ; ಆದರೆ ಅವನು ಹುಟ್ಟಾ ನಿರುಪದ್ರವಿಯೂ, ವಿಚಾರವಂತನೂ ಇದ್ದದ ರಿಂದ, ಮತ್ತೆ ಮೊದಲಿನ ಸ್ಥಿತಿಗೆ ಹತ್ತಲು ಅಷ್ಟೊಂದು ಪ್ರಯಾಸ ವಾಗಲಿಲ್ಲ. ಅವನು ಅಡ್ಡ ಹಾದಿಯನ್ನು ಹಿಡಿದಾಗ್ಗೆ ಸಹ ಅವನ ಸದಸದ್ವಿವೇಕ ಬುದ್ಧಿಯು ಅವನಿಗೆ ಆಗಾಗ್ಗೆ ಚುಚ್ಚುತ್ತಲಿತ್ತು; ಆದರೆ ಸ್ವಾರ್ಥಿಗಳಾದ ಅವನ ಗೆಳೆಯರ ಬುರುಡಿಯ ಮಾತುಗಳ ಮುಂದೆ ಅದರ ತೇಜವು ಅಡಗಿ ಹೋಗಿತ್ತು.

ಒಂದು ದಿವಸ ಅವನ ದೂರಿನ ಆಪ್ತನು ಅವನನ್ನು ತಿರು ಗಾಡಲಿಕ್ಕೆಂದು ಕರೆದುಕೊಂಡು ಹೋಗಿ, ಒಂದು ನಿರ್ಜನವಾದ ಪ್ರದೇಶದಲ್ಲಿ ಕುಳಿತು ಅವನಿಗೆ ಕೆಳಗಿನಂತೆ ಚೆನ್ನಾಗಿ ಬುದ್ಧೀ ಹೇಳಿದನು.

"ಗೋವಿಂದಾ, ನೀನು ಮುಂಬೈಯಿಗೆ ಬಂದು ಏನು ಕೆಲಸ ನಡಿಸಿರುವಿ? ನಿನ್ನ ಆಂಬೋಣವಾದರೂ ಏನಿರುವದು? ಈ ಬಗೆಯ ವರ್ತನದಿಂದ, ಮತ್ತು ದುರ್ಜನರ ಸಂಗದಿಂದ ಮುಂದೆ ನಿನ್ನ ಗತಿಯು ಏನಾಗುವದೆಂಬದರ ಬಗ್ಗೆ ನೀನು ವಿಚಾರ ಮಾಡಿರು ವಿಯಾ? ನಿನ್ನ ಕೈಯಲ್ಲಿ ನಾಲ್ಕು ದುಡ್ಡು ಇರುವ ವರೆಗೆ ಮಾತ್ರ ಈ ಮಿತ್ರರು! ದುಡ್ಡೆಲ್ಲ ತೀರಿದ ಮರುದಿನ ಇವರಾರೂ ನಿನ್ನ ನೆರಳಿಗೆ ಸಹ ನಿಲ್ಲಲಾರರು ಇನ್ನಾದರೂ ಪೂರ್ಣ ವಿಚಾರ ಮಾಡು ನಿನಗೆ ಇನ್ನೂ ಈ ಜಗತ್ತಿನ ಅನುಭವವಿಲ್ಲ ನೋಡು. ನೀನು ನಿಮ್ಮ ಊರಲ್ಲಿದ್ದಾಗ ಹ್ಯಾಗೆ ಗಟ್ಟಿಮುಟ್ಟಯಾಗಿದ್ದಿ; ಮತ್ತು ಈಗ ಎಷ್ಟು ನಿಸ್ತೇಜನಾಗಿ ಕಾಣುತ್ತೀರುವಿ! ನಿನಗ ಇಪ್ಪತ್ತುನಾಲ್ಕು

ವರುಷಗಳಾಗಿವೆ. ಹೀಗಿದ್ದು ನಿನ್ನ ಸ್ಥಿತಿಯು ಈ ಪ್ರಕಾರದ್ದಾಗಿದೆ! ಆದರೆ ನಾಳೆ ನಿನ್ನ ದುಡ್ಡೆಲ್ಲ ಹಾಳಾದ ಮೇಲಂತೂ ನಿನ್ನ ಗತಿಯು ಹೇಗಾಗುವದೋ ದೇವರಿಗೇ ಗೊತ್ತು! ಇದ್ದರಿಂದ ಈಗ ನಾನು ನಿನಗೆ ಈ ಬುದ್ಧಿವಾದವನ್ನು ಹೇಳುತ್ತೇನೆ; ಇನ್ನೂ ಕಾಲವು ಮೀ-ರಿಲ್ಲ. ನೀನು ಸುಧಾರಿಸಬೇಕೆಂದು ಗಟ್ಟಿಮನಸ್ಸು ಮಾಡಿದರೆ, ಇನ್ನೂ ಆಸ್ಪದವಿರುವದು.

ಆ ವೃದ್ಧಹಿತಚಿಂತಕನು ಈ ಪರಿಯಿಂದ ಕಿವಿ ಹಿಂಡಿ ಹೇಳಿದ ಮೇಲೆ ಗೋವಿಂದರಾಯನಿಗೆ ಬುದ್ಧಿ ಬಂತು. ಅವನು ಕೂಡಲೆ ತನ್ನ ದುಷ್ಟಗೆಳೆಯರ ಸಹವಾಸ ಬಿಡುವದನ್ನು ನಿಶ್ಚಯಿಸಿ, ಅದರಂತೆ ಆಚರಿಸಿದನು. ಇದನ್ನು ಕಂಡು ಅವನ ಆಪ್ತನಿಗೂ ತುಂಬಾ ಸಂತೋಷವಾಯಿತು. ಇಷ್ಟೇ ಅಲ್ಲ; ಆದರೆ ಗೋವಿಂದರಾಯನು ತನ್ನ ಉಪದೇಶದ ಕಡೆಗೆ ಕಿವಿಗೊಟ್ಟನೆಂಬುದೂ ನಂಬಿಗೆಯಾದ ಕೂಡಲೆ ಆತನು ಮುಂದೆ ಮಾತ್ರ ಅವನಿಗೆ ಹೆಚ್ಚೆಚ್ಚು ಕಲ್ಯಾಣವನ್ನು ಹೇಗೆ ಮಾಡಬೇಕೆಂಬ ವಿಚಾರದಲ್ಲಿ ತೊಡಗಿದನು. ಕಡೆಗೆ ಅವನಿಗೆ ಒಂದೇ ವಿಚಾರವು ಸರಿದೋರಿತು. ಅದರಂತೆ ಅವನು ಗೋವಿಂದರಾಯನಿಗೆ ಮತ್ತೊಮ್ಮೆ ಲಗ್ನ ಮಾಡಿಬಿಟ್ಟರೆ ಅವನು ಸಂಸಾರದಲ್ಲಿ ತೊಡಗಿ ಮೊದಲಿನಂತೆ ಮಾರ್ಗಕ್ಕೆ ಹತ್ತುವನೆಂದು ನೆನಿಸಿದನು. ಮುಂದೆ ಒಂದು ಬಡಕುಟುಂಬದೊಳಗಿನ ಸುಶೀಲ ಕನ್ಯೆಯನ್ನು ಗೊತ್ತು ಮಾಡಿ ಗೋವಿಂದರಾಯನ ಲಗ್ನವನ್ನು ಮಾಡಿದನು. ಆ ಸ್ತ್ರೀಯ ಸಂಬಂಧವೇ ಭಾಗೀರಥೀದೇವಿಯದಾಗಿತ್ತು. ಗೋವಿಂದರಾಯನು ಎರಡನೆಯ ಲಗ್ನವಾದಾಗ ಅವನ ಬಳಿಯಲ್ಲಿ ೩೦೦ ರೂಪಾಯಿಗಳು ಮಾತ್ರ ಉಳಿದಿದ್ದವು. ಅದರಲ್ಲಿ ಅರ್ಧಕ್ಕಿಂತ ಹೆಚ್ಚು ಹಣವು ಹೊಸ ಸಂಸಾರ ಹೂಡುವದಕ್ಕಾಗಿ ಖರ್ಚಾಗಿ ಹೋಯಿತು. ಆ ಮೇಲೆ ಅವನು ಕೆಲಸವನ್ನು ಹುಡುಕಹತ್ತಿದನು.

ಆದರೆ ಅದರಲ್ಲಿ ಅವನಿಗೆ ಯಶಸ್ಸು ಒರಲಿಲ್ಲ. ಮುಂದೆ ನಾಲ್ಕಾರು ತಿಂಗಳುಗಳ ವರೆಗೆ ಸಂಸಾರ ಮಾಡುವದರೊಳಗಾಗಿಯೇ ಅವನ ಹತ್ತಿರ ಇದ್ದ ಹಣವು ಸಂಪೂರ್ಣಕ್ಕೆ ಬಂತು. ಅಂದಿನಿಂದಲೇ ಅವನ ನಿಜವಾದ ದುರ್ದೈವಕ್ಕೆ ಪ್ರಾರಂಭವಾಯಿತು ಎಲ್ಲಿಯಾದರೂ ಕೆಲಸ ದೊರೆಯಬೇಕೆಂದು ಅವನು ಮನಮುಟ್ಟಿ ಧಾವತಿ ಮಾಡಿದನು. ಅವನಿಗೆ ಕಡೆತನಕ ಕೆಲಸ ಸಿಗಲೇ ಇಲ್ಲ. ಇಷ್ಟರಲ್ಲಿಯೇ ಅವನ ಅತ್ತೆ-ಮಾವಂದಿರಿಬ್ಬರೂ ಮೃತರಾಗಲು, ಅವನ ಅತ್ತ ಕಡೆಯ ಆಧಾರವಾದರೂ ಕಡಿದು ಹೋದಂತಾಯಿತು ಅವನ ಸಾಲವು ದಿನ ದಿನಕ್ಕೆ ಹೆಚ್ಚುತ್ತ ನಡೆಯಿತು; ಮತ್ತು ಅದರ ಸಂಗಡ ಅವನ ಸಂಸಾರವೂ ಬೆಳೆಯಿತು ಅವನ ಚಿಂತೆಯನ್ನು ಹೆಚ್ಚಿಸಲು ಇಬ್ಬ ಮಗಳು ಹುಟ್ಟಿದಳು ಈ ಮೊದಲನೆಯ ಮಗಳೇ ನಮ್ಮ ವಾಚಕರ ಪರಿಚಯಸ್ಥಳಾದ ಕೃಷ್ಣೆಯು.

ಆಗ ಅವನು ಗಿರಗಾಂವದೊಳಗಿನ ಒಂದು ಓಣಿಯಲ್ಲಿ ಇರುತ್ತಿದ್ದರು ಅವರ ನೆರೆಯಲ್ಲಿಯೇ ಮತ್ತೊಂದು ಮನೆಯ ಅಟ್ಟದ ಮೇಲೆ ಶಿವರಾಮಪಂತ ದೇಶಪಾಂಡೆ ಎಂಬ ಹೆಸರಿನ ಗೃಹಸ್ಥನು ಇರುತ್ತಿದ್ದನು ಅವನ ಪತ್ನಿಯ ಪರಿಚಯವು ಭಾಗೀರಥಿದೇವಿಗೆ ಆಯಿತು. ಅವಳು ಅಂತಃಕರಣದ ಸ್ವಭಾವದವಳಿದ್ದದರಿಂದ ಭಾಗೀರಥಿದೇವಿಗೆ ಪ್ರತಿಯೊಂದು ರೀತಿಯಿಂದ ಸಹಾಯ ಮಾಡುತ್ತಿದ್ದಳು. ಒಂದು ದಿವಸ ಏಕಾಂತದಲ್ಲಿ ತನ್ನ ಗಂಡನ ಮುಂದೆ ಅವಳು:—ಗೋವಿಂದರಾಯರ ಸಂಬಂಧದ ಮಾತು ತೆಗೆದಳು. ಶಿವರಾಮಪಂತನು ಪರೇಳದ ಪೋಸ್ಟಮಾಸ್ತರನಿದ್ದನು. ಅವನಿಗೆ ತಿಂಗಳಿಗೆ ೫೦ ರೂಪಾಯಿ ಸಂಬಳವಿತ್ತು. ಅವರು ಗೋವಿಂದರಾಯನಿಗೆ ಪೋಸ್ಟಖಾತೆಯಲ್ಲಿ ಅರ್ಜಿ ಮಾಡಲಿಕ್ಕೆ ಹೇಳಿದರು. ಆದರಂತೆ ಅರ್ಜಿಯನ್ನು ಕಳಿಸಿದ ಮೇಲೆ ಅವರಾದರೂ ಅವನ ವಿಷಯವಾಗಿ

ಬಹಳ ಪ್ರಯತ್ನ ಮಾಡಿದರು; ಆದರೂ ಅದು ನಿಷ್ಫಲವಾಯಿತು. ಕಡೆಗೆ ಅವರು ಒಂದು ಯುಕ್ತಿಯನ್ನು ಹುಡುಕಿ ತೆಗೆದರು. ಅದರಲ್ಲಿ ಅವರಿಗೆ ತಕ್ಕ ಮಟ್ಟಿಗೆ ಫಲ ದೊರೆಯಿತು ಅವರು ಒಂದು ದಿವಸ ಗೋವಿಂದರಾಯನನ್ನು ತಮ್ಮ ಸಂಗಡ ಪೋಸ್ಟಆಫೀಸಿಗೆ ಕರೆದೊಯ್ದರು; ಮತ್ತು ಅವನಿಗೆ ಬೇರೆ ಬೇರೆ ಪ್ರಕಾರದ ಟಿಕೀಟು ಗಳನ್ನು ಪೋಸ್ಟಆಫೀಸಿನ ಹೊರಮಗ್ಗಲಿನಲ್ಲಿ ಕುಳಿತು ಮಾರಲಿಕ್ಕೆ ಹೇಳಿದರು. ಆ ಪೋಸ್ಟಿನ ಹತ್ತರವೇ ಎಲ್ಲ ಗಿರಣಿಯ ಕೂಲಿಕಾರರು ಇದ್ದದರಿಂದ, ಅವರ ಪತ್ರ ಬರೆಯೋಣ, ತಾರು ಮಾಡೋಣ, ಅರ್ಜಿ ಮತ್ತು ಮನಿಆರ್ಡರ ಕಳಿಸುವ ಎಲ್ಲ ಕೆಲಸಗಳು ಗೋವಿಂದ ರಾಯನ ಕಡೆಗೇ ಬರಹತ್ತಿದವು. ಈ ಉದ್ಯೋಗದಿಂದ ಗೋವಿಂ ರಾಯನಿಗೆ ಪ್ರಾಪ್ತಿ ಯಾಗಲಾರಂಭಿಸಿತು; ಮತ್ತು ಟಿಕೀಟ ಮಾರಿದ ಕಮಿಶನ್ ಸಹ ಬರಹತ್ತಿತು. ಇದರಿಂದ ದಿನಾಲು ೧-೨ಆಣೆ-೧ ರೂಪಾಯಿಯ ವರೆಗೆ ಪ್ರಾಪ್ತಿಯಾಗಹತ್ತಿದ್ದರಿಂದ ಗೋವಿಂದ ರಾಯನ ಬಡತನವು ಹಿಂಗಿತು.

ಅವನ ಈ ಸ್ವತಂತ್ರ ಕೆಲಸವು ನಾಲ್ಕು ವರ್ಷಗಳ ವರೆಗೆ ನಿರಾತಂಕವಾಗಿ ನಡೆಯಿತು ಅಷ್ಟರೊಳಗೆ ಅವನ ಸಂಸಾರವೂ ಬೆಳೆಯಿತು ಸದಾಶಿವನೂ, ಯಮುನೆಯೂ ಹುಟ್ಟಿದರು. ಹೀಗಿರಲು ಶಿವರಾಮಪಂತರಿಗೆ ಒಮ್ಮಿಂದೊಮ್ಮೆ ಮತ್ತೊಂದು ಊರಿಗೆ ವರ್ಗವಾಗಿ ಅವರ ಸ್ಥಳಕ್ಕೆ ಮತ್ತೊಬ್ಬ ಪೋಸ್ಟ ಮಾಸ್ತರನು ಬಂದನು ಅವನು ಬಂದ ಕೂಡಲೆ ಗೋವಿಂದರಾಯನಿಗೆ ಆಫೀಸಿನ ಆವಾರದಲ್ಲಿ ಕೂಡುವದು ಕೂಡ ದುಸ್ತರವಾಯಿತು!

ಭಾಗೀರಥಿದೇವಿಯು ತನ್ನ ಈ ಸಂಸಾರದ ಸುದ್ದಿಯನ್ನು ಮುಗಿಸುವಷ್ಟರಲ್ಲಿಯೇ ಹುಡುಗರು ಉಂಡು ಹೊರಗೆ ಬಂದರು. ಯಮುನೆಯು ತಾಯಿಯ ಹತ್ತರ ಬಂದ ಕೂಡಲೆ ಮುದ್ದುಮಾತು

ಗಳಿಂದ:— ಅವ್ವಾ, ಅಪ್ಪನು ಬಂದಲೆ (ರೀ)? ಅವ್ವಾ, ನಾ ಊತಾ ಮಾದಿದೆ ಅವ್ವಾ, ಪಾಪಾನ್ನ ತೊತ್ತಿಲಾಗೆ ಯಾಹತ್ತ ಹಾಕತೀಯು? ಎಂದು ಕೇಳಹತ್ತಿದಳು. ಅವಳನ್ನು ತನ್ನ ಹತ್ತರ ಎಳೆದು ಅವಳ ಬಾಯನ್ನು ಒರಿಸಿ, ಭಾಗೀರಥಿದೇವಿಯು ಗೋಪಿಕಾಬಾಯಿಗೆ:— "ಗೋಪಿಕಾಬಾಯಿಯವರೇ, ಕೆಲಸ ಹೋಗಿ ಇಂದಿಗೆ ೧॥ ವರ್ಷಗಳಾದವು; ಮತ್ತಿಲ್ಲಿಯೂ ಕೆಲಸ ಸಿಗದ್ದರಿಂದ ಅವರ ಮನಸ್ಸು ಅಸ್ವಸ್ಥವಾಗಿದೆ. ಎಲ್ಲಿಯಾದರೂ ಕೆಲಸ ದೊರೆಯ ಬೇಕೆಂದು ವಿಶ್ವಪ್ರಯತ್ನ ಮಾಡಿ ನೋಡಿದರು; ಆದರೆ ಅದೆಲ್ಲ ವ್ಯರ್ಥವಾಯಿತು ಆಗಂತೂ ತಿಂಗಳಿಗೆ ೨೦-೨೫ ರೂಪಾಯಿಗಳು ಬರುತ್ತಿದ್ದದರಿಂದ, ಹೊಟ್ಟೆ-ಬಟ್ಟೆಗೆ ಸರಿಯಾಗುತ್ತಿತ್ತು. ನೀವೇ ನೋಡಿರಿ; ೧೦ ರೂ. ಮನೆಯ ಬಾಡಿಗೆ, ೩ ರೂ. ಕಚೇರಿಗೆ ಹೋಗಿ ಬರುವ ಖರ್ಚು ಮತ್ತು ಉಳಿದ ೧೦-೧೨ ರೂಪಾಯಿಗಳಲ್ಲಿ ಕಾಳು, ಎಣ್ಣೆ, ಕಟ್ಟಿಗೆ, ಹಾಲು, ತುಪ್ಪ ಮೊದಲಾದ ಸಂಸಾರದ ಸಾಮಾನುಗಳನ್ನು ಪೂರೈಸಬೇಕಾದರೆ ಸಾಕು-ಸಾಕಾಗಿ ಹೋಗುತ್ತಿತ್ತು. ಇದಲ್ಲದೆ ಹುಡುಗರ ಅರಿವೆ-ಅಂಚಡಿಯ ಖರ್ಚು ಬೇರೆ; ಇಷ್ಟು ಖರ್ಚಿನ ಬಾಬುಗಳಿರಲು, ಈಗ ೧॥ ವರ್ಷಗಳನ್ನು ನಾವು ಹೇಗೆ ಕಳೆದೆವೆಂಬದು ದೇವರಿಗೇ ಗೊತ್ತು!" ಹೀಗೆಂದು ಭಾಗೀರಥಿ ದೇವಿಯು ಮತ್ತೆ ಒಂದು ದೀರ್ಘವಾದ ಉಸಿರನ್ನು ಬಿಟ್ಟು:— "ಈಗಂತೂ ಈ ನನ್ನ ಬಾಣಂತಿತನದ ಸಲುವಾಗಿ ಅವರ ಜೀವವು ತೀರ ಸಣ್ಣಾಗಿದೆ!"

ಗೋ:— "ಆಗದೇನು ಮಾಡೀತು? ಬಾಣಂತಿತನವೆಂದರೆ ಸರ್ವಸಾಧಾರಣವಾದ ಮಾತೇ? ನೀವು ಇಷ್ಟು ಕಷ್ಟಗಳೊಳಗಿಂದ ಸುಖರೂಪವಾಗಿ ಹಡೆದು ಎದ್ದಿರೆಂಬುವದು ಸುದೈವವೇ ಸರಿ! ಆದರೆ ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? ರಾತ್ರಿಯು

ಬಹಳವಾಗಿದೆ. ಕೂಸನ್ನು ತೊಟ್ಟಿಲಲ್ಲಿ ಹಾಕಿ ಕೆಲಸವನ್ನು ತೀರಿಸಿ ಬಿಡೋಣ.

ಕೆಲ ಹೊತ್ತಿನ ಮೇಲೆ ಗೋಪಿಕಾಬಾಯಿಯು ಕೂಸನ್ನು ತೊಟ್ಟಿಲೊಳಗೆ ಹಾಕಿದಳು; ಮತ್ತು ಹುಡಿಗೆಯ ಬಾಯಲ್ಲಿ ಸಕ್ಕರೆಯನ್ನು ಹಾಕಿ: "ಭಾಗೀರಥೀದೇವಿಯವರೇ, ಹೆಸರೇನೆಂದು ಇಡಬೇಕು?" ಎಂದು ಕೇಳಿದಳು

"ಏನಾದರೂ ಇಟ್ಟು ಬಿಡಿರಿ"

ಭಾಗೀರಥೀದೇವಿಯವರೇ, ಇಷ್ಟೇಕೆ ನ್ಯಾಯವನ್ನು ಕಳಕೊಳ್ಳುವಿರಿ?

ಇಷ್ಟರಲ್ಲಿಯೇ ಚಿಕ್ಕ ಸದಾಶಿವನು ಮುಂದೆ ಬಂದು:— "ಅವ್ವಾ, ಹೆಸರು ಏನು ಇಡಬೇಕೆಂಬುದನ್ನು ನಾನು ಹೇಳಲಾ? ತಂಗೆವ್ವನೆಂದು ಇಡ್ರಿ!"

ಆ ಮೇಲೆ ಭಾಗೀರಥೀದೇವಿಯು ಮೆಲ್ಲನೆ 'ಸಾವಿತ್ರಿ ಎಂದು ಹೆಸರು ಇಟ್ಟು ಬಿಡಿರಿ' ಎಂದು ಅಂದಳು. ಕೂಡಲೇ ಗೋಪಿಕಾಬಾಯಿಯು, 'ಸಾವಿತ್ರಿ ಇಟ್ಟೆನ್ಟೆ ಇಟ್ಟೆನ್ಟೆ ಕುರ್ರ...' ಎಂದು ಕೂಸಿನ ಕಿವಿಯಲ್ಲಿ ಉದರಿ ತೊಟ್ಟಿಲಕ್ಕೆ ಬಂದು ಝುಲರಿ ಹಾಕಿ ಜೋಗುಳ ಪದವನ್ನು ಹಾಡಿದಳು. ಆ ಮೇಲೆ ಭಾಗೀರಥೀದೇವಿಯು ಹತ್ತರ ಕೆಲಹೊತ್ತು ಕುಳಿತು ಮಾತನಾಡಿ ತಮ್ಮ ಮನೆಗೆ ಹೊರಟು ಹೋದಳು. ಆಗ್ಗೆ ರಾತ್ರಿಯು ಹನ್ನೊಂದು ಹೊಡೆದಿತ್ತು. ಹುಡುಗರಿಗೆ ನಿದ್ರೆ ಬಂದಿದೆಯೆಂದು ತಿಳಿದು ಭಾಗೀರಥೀದೇವಿಯು ಅಲ್ಲಿಯೇ ಮೂಲೆಯಲ್ಲಿ ಬಿದ್ದ ಹರಕು ಗಾದಿಯನ್ನು ಹಾಸಿದಳು; ಆದರೆ ಈ ಹೊತ್ತು ತೊಟ್ಟಿಲವನ್ನು ಕಟ್ಟುವದರಿಂದ ಗಾದಿಯು ಹಿಡಿಸಲಿಲ್ಲ; ಅದ್ದರಿಂದ ತೊಟ್ಟಿಲವನ್ನು ಬಿಚ್ಚಿ ಗೋಡೆಗೆ ಆನಿಸಿಟ್ಟು ಹಾಸಿಗೆ ಹಾಸಿದಳು. ಆದರೆ ಆ ತೊಟ್ಟಿಲವು ಬಹಳ ಹಳೇದೂ ಜಡವೂ ಇದ್ದದ

ಹೊಟ್ಟೆಯಲ್ಲಿ ನೆಟ್ಟಿತ್ತು! ಅದರ ಹಜ್ಜೆಯಿಂದ ಆ ಹುಡಿಗೆಯು ನುಗ್ಗು ನುಗ್ಗಾಗಿ ಹೋದಳು. ಅವಳಿಗೆ ಎಚ್ಚರದಪ್ಪಿ ಮಾತೇ ಬಂದಾದವು. ಭಾಗೀರಥಿದೇವಿಯು ಮತ್ತೊಂದು ಕಡ್ಡಿ ಕೊರೆದು ನೋಡಲು, ನಡೆದ ಸಂಗತಿಯು ಅವಳ ಕಣ್ಣಿಗೆ ಬಿತ್ತು. ಯಮುನೆಯ ಮೋರೆಯು ರಕ್ತದಿಂದ ತೊಯ್ದಿದ್ದು, ಅವಳ ಹೊಟ್ಟೆಯೊಳಗಿಂದಲೂ ರಕ್ತವು ಧಾರೆಗೊಂಡು ಹರಿಯುತ್ತಲಿತ್ತು. ಭಾಗೀರಥಿದೇವಿಯು ಹೌಹಾರಿ ಹಮ್ಮಲಿ ಚಿಟ್ಟನೆ ಚೀರಿದಳು. ಅದನ್ನು ಕೇಳಿ ಸದಾಶಿವನೂ, ಕೃಷ್ಣೆಯೂ ಗಾಬರಿಯಾಗಿ ಹದರುತ್ತ ಎದ್ದು ಕುಳಿತರು ಅವರಿಬ್ಬರೂ 'ಅವ್ವಾ-ಅವ್ವಾ' ಎಂದು ಚೀರುತ್ತ ಅಳಹತ್ತಿದರು

'ಅಯ್ಯೋ' ಯಾರಾದರೂ ಬೇಗನೆ ಓಡಿ ಬಂದು ನನ್ನ ಮಗು ವಿನ ಜೀವ ಉಳಿಸಿರಿ? ಹಾ! ಘಾತವಾಯಿತು! ಘಾತವಾಯಿತು!!" ಎಂದು ಭಾಗೀರಥಿದೇವಿಯು ಹಿಂದೇಸವನೆ ಹದರ ಹತ್ತಿದಳು. ಈ ಮೇರೆಗೆ ಆ ನಡುರಾತ್ರಿಯ ಪ್ರಶಾಂತ ಸಮಯದಲ್ಲಿ ಆ ಕೋಣೆಯೊಳಗೆ ಬಹು ಭೀಕರವಾದ ಆಕ್ರಾಂತವು ನಡೆಯಿತು. ಈ ಹೃದಯದ್ರಾವಕವಾದ ಧ್ವನಿಯನ್ನು ಕೇಳಿ ನೆರೆಹೊರೆಯವರು ಎಚ್ಚತ್ತು ಓಡಿ ಬಂದರು ಎಲ್ಲಕ್ಕೂ ಮುಂದಿನವನು ದೀಪ ಹಿಡಿದು ನೋಡಲು ಎಲ್ಲ ಸಂಗತಿಯೂ ಅವನಿಗೆ ತಿಳಿಯಿತು. ಯಮುನೆಯ ಮೈಮೇಲಿನ ಎಚ್ಚರವು ತಪ್ಪಿಹೋಗಿತ್ತು. ಬಂದವರು ಅವಳ ಮೈಮೇಲೆ ಬಿದ್ದ ತೊಟ್ಟಿಲವನ್ನು ದೂರ ಸರಿಸಿ ಇಟ್ಟರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಡಾಕ್ಟರನನ್ನು ಕರೆತಂದರು. ಅವನು ಆ ಹುಡಿಗೆಯ ಭಯಂಕರವಾದ ಘಾಯಗಳನ್ನು ನೋಡಿ, ಅವಳ ಜೀವಿತದ ವಿಷಯಕ್ಕೆ ನಿರಾಶೆಯನ್ನೇ ತೋರಿಸಿದನು. ಆ ಮೇಲೆ ಆ ಹುಡಿಗೆಯ ಘಾಯಗಳನ್ನು ಕಟ್ಟಿದರು ಇಷ್ಟೆಲ್ಲ ಕೆಲಸವಾದ ಮೇಲೆ ಬಂದವರೆಲ್ಲರೂ: 'ಗೋವಿಂದರಾಯರು ಎಲ್ಲಿರುವರು?'

ಎಂದು ಕೇಳಹತ್ತಿದರು; ಆದರೆ ಅವರು ಇನ್ನೂ ಮನೆಗೆ ಬಂದಿಲ್ಲ ವೆಂಬದು ಅವರಿಗೆ ತಿಳಿಯಿತು ಆದರೂ ಇಂಥ ಅಪರಾತ್ರಿಯಲ್ಲಿ ಅವರನ್ನು ಹುಡುಕಲಿಕ್ಕೆ ಹೋಗುವವರಾರು?

ಆ ಇಡಿ ರಾತ್ರಿಯಲ್ಲೆಲ್ಲ ನೆರೆಮನೆಯ ಗೋಪಿಕಾಬಾಯಿಯು ಆ ಗಾಯ ಹೊಂದಿದ ಹುಡಿಗೆಯ ಹತ್ತಿರವೇ ಕುಳಿತಿದ್ದಳು. ಪಾಪ! ಭಾಗೀರಥಿದೇವಿಯ ಮನಸ್ಸಿನ ಸ್ಥಿತಿಯು ಎಷ್ಟು ಶೋಚನೀಯವಾಗಿರಬಹುದೆಂಬದನ್ನು ವಾಚಕರೇ ಊಹಿಸಬಹುದು. ಬೆಳಗು ಮುಂಜಾನೆ ಯಮುನೆಯ ಮೈಯಲ್ಲಿ ಉಂಡದಂಥ ಜ್ವರ ಬಂದವು. ಆಕೆಯ ಮೈಮೇಲೆ ಈಗ ಸ್ವಲ್ಪ ಎಚ್ಚರಿಕೆ ಹುಟ್ಟಿತ್ತು; ಆದರೆ ಅವಳಿಗೆ ಎಷ್ಟು ವೇದನೆಯಾಗುತ್ತಿತ್ತೆಂಬದು ಅವಳ ಸಣ್ಣ ಜೀವನಕ್ಕೇ ಗೊತ್ತು! ಮುಂಜಾನೆ ಮತ್ತೆ ಡಾಕ್ಟರನು ಬಂದನು. ಅವನು ಹುಡಿಗೆಯ ಗಾಯಗಳನ್ನು ನೋಡಿ ಪ್ರಕೃತಿಯನ್ನು ಪರೀಕ್ಷಿಸಿ, ಅದಕ್ಕೆ ತಕ್ಕ ಔಷಧದ ಯೋಜನೆಯನ್ನು ಮಾಡಿದನು ಭಾಗೀರಥಿದೇವಿಯ ಸ್ಥಿತಿಯು ಅತಿ ಕರುಣಾಜನಕವಾಯಿತು. ಒಂದು ಕಡೆಯಲ್ಲಿ ಗಂಡನ ಚಿಂತೆ, ಮತ್ತೊಂದು ಕಡೆಯಲ್ಲಿ ಹುಡಿಗೆಯ ಅತ್ಯಾವಸ್ಥೆಯು! ಹೀಗೆ ಕೆರೆ-ಬಾವಿಗಳ ನಡುವೆ ಸಿಕ್ಕಂತಾಗಿ ಅವಳ ಮನಸ್ಸು ಇಬ್ಬಗೆಯಾಗಿ ಕಸವಿಸಿಪಡತೊಡಗಿತು ಮರುದಿವಸ ರಾತ್ರಿಯಾದರೂ ಗೋವಿಂದರಾಯರ ಸುಳುವೇ ಇಲ್ಲ. ಆಗ ಭಾಗೀರಥಿದೇವಿಯು ಕಣ್ಣು ತುಂಬ ನೀರು ತಂದು ಗೋಪಿಕಾಬಾಯಿಗೆ ನೀವು ನಿಮ್ಮ ಯಜಮಾನರ ಮುಂದೆ ಹೇಳಿ ನನ್ನ ಗಂಡನ ಗೊತ್ತು ಹಚ್ಚಿ ಕೊಡಬೇಕೆಂದು ಬೇಡಿಕೊಂಡಳು, ಅದರಂತೆ ಗೋಪಿಕಾಬಾಯಿಯ ಪತಿಯಾದ ಹರಿಭಾವು ಎಂಬವನು ನೆರೆಹೊರೆಯ ಮಿತ್ರರ ಹೇಳಿಕೆಯ ಮೇರೆಗೆ ಪೋಲೀಸ ಸ್ಟೇಶನ್ನಿಗೆ ಹೋಗಿ ಈ ಸಂಗತಿಯನ್ನು ತಿಳಿಸಿ ಬರಬೇಕೆಂದು ಹೊರಟನು. ಇತ್ತ ಕಡೆಗೆ

ಯಮುನೆಯು ಇಹಲೋಕದ ಯಾತ್ರೆಯನ್ನು ಮುಗಿಸಿದಳು!

+†+ +†+ +†+ +†+

ಹರಿಭಾವುವು ಪೋಲೀಸಸ್ಟೇಶನ್ನಿಗೆ ಹೋಗಿ ಸುದ್ದಿ ಮುಟ್ಟಿಸಿದನು. ಆಗ ಅವನು ಗೋವಿಂದರಾಯನ ಮೈಬಣ್ಣ, ವಯಸ್ಸು, ನಿಲುವಿಕೆಗಳ ವಿಷಯಕ್ಕೆ ಮಾಡಿದ ವರ್ಣನೆಯನ್ನು ಕೇಳಿದೊಡನೆ ಫೌಜದಾರನು:—"ನೀವು ವರ್ಣಿಸಿದ ಮನುಷ್ಯನು ನಿನ್ನೆಯ ರಾತ್ರಿ ಇದೇ ಬೈಲಿನಲ್ಲಿ ಇರುವ ಬಾವಿಯೊಳಗೆ ಬಿದ್ದು ಪ್ರಾಣ ಕೊಟ್ಟನು. ಪೋಲೀಸರು ಇಂದು ಮುಂಜಾನೆ ಆ ಪ್ರೇತವನ್ನು ಹೊರತೆಗೆದರು. ಆ ಪ್ರೇತದ ಆಪ್ತೇಷ್ಟರು ಶೋಧ ಮಾಡುತ್ತ ಬರಬಹುದೆಂದು ಸಂಜೆಯ ವರೆಗೆ ಹಾಗೆಯೇ ಇಟ್ಟಿದ್ದೆವು; ಆದರೆ ಯಾರೂ ಬರಲಿಲ್ಲ ಆದ್ದರಿಂದ ಪಂಚರ ಸಮಕ್ಷಮ ಆ ಪ್ರೇತಕ್ಕೆ ಯಾರೂ ದಿಕ್ಕಿಲ್ಲವೆಂದು ನಿರ್ಣಯಿಸಿ, ಅದನ್ನು ಸುಟ್ಟು ಬಿಟ್ಟೆವು ಇಷ್ಟು ಹೊತ್ತಿನ ವರೆಗೆ ನೀವು ಹೇಗೆ ಕಣ್ಣು ಮುಚ್ಚಿಕೊಂಡು ಕುಳಿತಿದ್ದಿರಿ? ನಿಮಗೆ ಈ ಸುದ್ದಿಯು ಹೇಗೆ ತಿಳಿಯಲಿಲ್ಲ?"

ಹರಿಭಾವುವು ಮನೆಯಲ್ಲಿ ಉಂಟಾದ ಸರ್ವಸ್ಥಿತಿಯನ್ನು ತಿಳಿಸಿ ಹೇಳಿದನು ಅನಂತರ ಸತ್ತವನು ಜೀವ ಕೊಡಲಿಕ್ಕೆ ಏನು ಕಾರಣವಾಯಿತೆಂಬದನ್ನು ಗೊತ್ತು ಹಚ್ಚಲಿಕ್ಕೆಂದು ಫೌಜದಾರ ಸಾಹೇಬನು ತನ್ನ ಸಂಗಡ ನಾಯಕ, ಜಮಾದಾರರನ್ನು ಕರಕೊಂಡು ಹರಿಭಾವೂನ ಸಂಗಡ ಅವರಿದ್ದ ಓಣಿಗೆ ಹೋದನು. ಆಗ ಭಾಗೀರಥಿದೇವಿಯ ಮನೆಯಲ್ಲಿ ಪ್ರಚಂಡವಾದ ಆಕ್ರೋಶವು ನಡೆದಿತ್ತು. ಗಾಯದ ಮೇಲೆ ಉಪ್ಪಿಕ್ಕಿದಂತೆ ಮನೆಯ ಮುಂದೆ ಪೋಲೀಸ ಪಾರ್ಟಿಯೊಂದು ಬಂದು ನಿಂತಿತು ವಾಚಕರೇ, ಭಾಗೀರಥಿದೇವಿಗೆ ತನ್ನ ಪ್ರಿಯಪತಿಯ ಮರಣದ ಸುದ್ದಿಯು ತಿಳಿಯಲು, ಅವಳ ಗತಿಯು ಏನಾಗಿರಬಹುದು? ಹರ ಹರಾ! ಇಂಥ

ಭಯಂಕರವಾದ ಸ್ಥಿತಿಯ ಕಲ್ಪನೆಯನ್ನು ಮಾಡುವ ಪ್ರಸಂಗವು ವೈರಿಗಳಿಗೆ ಕೂಡಾ ಬರಲಾಗದು!!

‡ ‡ ‡ ‡ ‡ ‡ ‡

ಕಾಲನ ಮಹಿಮೆಯು ಅಗಾಧವಾದದ್ದು! ಅವನ ಕಾರ್ಯವು ಅಬಾಧಿತವಾಗಿ ನಡೆಯುತ್ತದೆ. ಈ ಸಂಗತಿಯು ಒದಗಿ ಒಂದು ತಿಂಗಳ ಮೇಲೆ ಭಾಗೀರಥಿದೇವಿಯು ಮುಂಬಯಿಯಲ್ಲಿ ತಾನು ಇರುವ ಮನೆಯನ್ನು ಬಿಟ್ಟು, ದಾದರದಲ್ಲಿ ೨ನೇ ಪ್ರಕರಣದಲ್ಲಿ ವರ್ಣಿಸಿದ ಓಣಿಯೊಳಗೆ ತಿಂಗಳಿಗೆ ಮೂರು ರೂಪಾಯಿ ಬಾಡಿಗೆಯ ಒಂದು ಸಣ್ಣ ಕೋಣೆಯನ್ನು ಗೊತ್ತು ಮಾಡಿದಳು. ಈ ಹೊತ್ತಿನಲ್ಲಿ ಗೋಪಿಕಾಬಾಯಿಯೂ, ಆ ಓಣಿಯೊಳಗಿನ ಉಳಿದ ಜನರೂ ತಮಗೆ ಶಕ್ಯವಿದ್ದಷ್ಟು ಸಹಾಯ ಮಾಡಿದರು. ದಾದರಕ್ಕೆ ಹೋಗಿ ಇರಹತ್ತಿದ ಮೇಲೆ ಹುಡುಗರು ತೀರ ಚಿಕ್ಕವರಿದ್ದದರಿಂದ, ಭಾಗೀರಥಿದೇವಿಗೆ ತಾನೇ ದುಡಿದ ಹೊರತು ಗತ್ಯಂತರವಿದ್ದಿಲ್ಲ. ಅವಳು ಬಹಳ ತಿಳುವಳಿಕೆಯುಳ್ಳ, ಶಾಂತಸ್ವಭಾವದ ಮತ್ತು ಮನಮುಟ್ಟಿ ದುಡಿಯುವ ಹೆಂಗಸಾಗಿದ್ದಳು. ಇದರಿಂದಲೇ ಅವಳು ಎರಡನೆಯವರ ಮುಸುರೆ ತಿಕ್ಕಿ, ಕುಟ್ಟುವ-ಬೀಸುವ ಕೆಲಸಗಳನ್ನು ಮಾಡಿ ಹತ್ತು ವರ್ಷ ಕಾಲ ಕಳೆದಳು; ಆದರೆ ಮುಂದೆ ಮಾತ್ರ ಅವಳ ಪಕ್ಕೆಯಲ್ಲಿ ನೋವು ಉಂಟಾಗಿ, ಅವಳ ಕೈಯಿಂದ ಆ ಕಷ್ಟಕರವಾದ ಕೆಲಸಗಳು ನೀಗದಂತಾದವು. ಮುಂದೆ ಬರಬರುತ್ತ ಅವಳಿಗೆ ಹೃದಯವಿಕಾರದ ರೋಗವುಂಟಾಯಿತು. ಈ ದುಃಖದಲ್ಲಿಯೇ ಒಂದಿಷ್ಟು ಸುಖವೆಂದರೆ, ಅವಳ ಹಿರೇಮಗಳಾದ ಕೃಷ್ಣೆಯ ಲಗ್ನವೊಂದು ಸುಸೂತ್ರವಾಗಿ ಜರಗಿದ್ದು. ಅವರ ಮನೆಯ ಮಗ್ಗಲಿಗೇ ಸದಾಶಿವನ ಮಾಸ್ತರನ ಮನೆಯಿತ್ತು. ಅವನು ಭಾಗೀರಥಿದೇವಿಯ ಬಡತನವನ್ನೂ, ಸದಾಚಾರವನ್ನೂ ಕಂಡು ತನ್ನ ಗುರುತಿನವನಾದ

ಒಬ್ಬ ವಿವೇಕಿ ತರುಣ ವರನನ್ನು ಹುಡುಕಿ, ಅವನಿಗೆ ಕೃಷ್ಣೆಯನ್ನು ಕೊಡಿಸಿದನು.

ವಾಚಕ ಮಹಾಶಯರೇ! ಈ ಮಾತಿಗೆ ೧-೨ ವರ್ಷಗಳಾಗಿ ಹೋದ ಮೇಲಿನ ಸಂಗತಿಯು ಈ ಹೊತ್ತು ನಮ್ಮ ಕಣ್ಣ ಮುಂದೆ ಇರುವದು. ಆದರೆ ನೀವು ಇದು ವರೆಗೆ ತಿಳಿದುಕೊಂಡ ಸಂಗತಿಯ ಮೇಲಿಂದ, ಇನ್ನೂ ಸಹ ಆ ದುರ್ದೈವಿಯಾದ ಕುಟುಂಬದವರ ದುಃಸ್ಥಿತಿಯು ಮುಗಿದಿರಲಿಲ್ಲವೆಂಬದನ್ನು ಸುಲಭವಾಗಿ ಅರಿತು ಕೊಂಡಿರಬಹುದು. ಎರಡನೆಯ ಪ್ರಕರಣದಲ್ಲಿ ಓದಿದ ಸಂಗತಿಗಳ ಮೇಲಿಂದ ಆ ಅನಾಥ ಕುಟುಂಬದವರು ಇವತ್ತಿನ ದಿವಸ ಎಂಥ ಶೋಚನೀಯ ಸ್ಥಿತಿಯಲ್ಲಿರಬಹುದೆಂಬದು ವಾಚಕರ ಲಕ್ಷ್ಯಕ್ಕೆ ಪೂರ್ಣವಾಗಿ ಬಂದಿರಬಹುದು.

---

## ೮ನೆಯ ಪ್ರಕರಣ.

# ತಾಳಲಾರದ ವೇದನೆ.

ಮಾಸ್ತರರ ಹತ್ತಿರ ದುಡ್ಡಿನ ವ್ಯವಸ್ಥೆಯನ್ನು ಮಾಡಿಕೊಂಡು ಸದಾಶಿವನು ತನ್ನ ಅಕ್ಕನನ್ನು ಕರೆದುಕೊಂಡು ಹೋಗಲಿಕ್ಕೆಂದು ಮುಂಜಾನೆಯ ಬೋಟಿನಿಂದ ಪನವೇಲಿಗೆ ಹೋದನು. ಶ್ರೀಪತ ರಾಯರು ಈ ಹೊತ್ತು ಮನೆಯಲ್ಲಿಯೇ ಇದ್ದರು. ವರ್ಗವಾದ ಸ್ಥಳಕ್ಕೆ ಹೋಗುವ ದಿವಸವು ಬಂದದ್ದರಿಂದ ಸಾಮಾನುಗಳನ್ನು ಕಟ್ಟಿ ತಯಾರ ಮಾಡಬೇಕೆಂದು ಅವರು ಈ ಹೊತ್ತು ರಜೆಯನ್ನು ತಕ್ಕೊಂಡಿದ್ದರು. ಇದಲ್ಲದೆ ಸದಾಶಿವನಾದರೂ ಇವತ್ತೇ ಊರಿಂದ

ಬರುವನೆಂದು ಅವರಿಗೆ ಪೂರಾ ಗೊತ್ತಿತ್ತು. ಆದ್ದರಿಂದ ಅವರು ಇನ್ನೂವರೆಗೆ ಊಟವನ್ನು ಸಹ ಮಾಡಿದ್ದಿಲ್ಲ. ಸದಾಶಿವನು ಬಂದ ಕೂಡಲೆ ಇಬ್ಬರ ಊಟವಾಗಿ ಹೊರಗಿನ ಕೋಣೆಯಲ್ಲಿ ಹೋಗಿ ಕುಳಿತು, ಶ್ರೀಪತರಾಯರು ಸದಾಶಿವನಿಗೆ ಅನೇಕ ಪ್ರಶ್ನೆಗಳನ್ನು ಮಾಡಿದರು; ಆದರೆ ಅವರು ಕೇಳಿದ್ದಕ್ಕೆ ಪಾಪ! ಸದಾಶಿವನು ಏನೆಂದು ಉತ್ತರ ಕೊಡುವನು? ತನ್ನ ಸ್ಥಿತಿಯು ಬೀಗನಿಗೆ ತಿಳಿದರೆ ಬಹಳ ಕೆಡಕೆನಿಸೀತು; ಮತ್ತು ಅಕ್ಕನಿಗಾದರೂ ಅತಿಶಯ ದುಃಖ ವಾದೀತೆಂದು ನೆನಿಸಿ, ಅವನು ಇದರ ಸಂಬಂಧವಾಗಿ ಪತ್ರದಲ್ಲಿ ಕೂಡ ಬರೆದು ತಿಳಿಸಿದ್ದಿಲ್ಲ; ಆದರೆ ಅವನ ನಿಜವಾದ ಅಂತಃಕರಣದ ಮತ್ತು ಪ್ರೇಮದ ಜನರ ಭೆಟ್ಟಿಯು ಸಮಯದಲ್ಲಿ ಅವನಿಂದ ಈ ಗುಟ್ಟನ್ನು ಬಚ್ಚಿಡುವದಾಗುವದಿಲ್ಲ ಶ್ರೀಪತರಾಯರು ಕೇಳುವದೊಂದೇ ತಡ, ಅವನ ದುಃಖವು ಒಮ್ಮಿಂದೊಮ್ಮೆ ಹೊರಚಲ್ಲಿ ಅವನ ಗಂಟಲ-ಶಿರ ಗಳು ಉಬ್ಬಿಬಂದವು. ಅವನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಇದನ್ನು ಕಂಡು ಶ್ರೀಪತರಾಯರು ಅವನನ್ನು ಸಮಾಧಾನಗೊಳಿಸಿ:- "ಬಾಳಾ ಸದಾಶಿವಾ, ಹೀಗೆ ಕೈಕಾಲು ಕಳಕೊಳ್ಳಬೇಡ! ಈ ದಿವಸ ಗಳೇನು ಹೀಗೆಯೇ ಯಾವಾಗಲೂ ಉಳಿಯಲಿಕ್ಕಿಲ್ಲ ನೀನೇ ವಿಚಾರ ಮಾಡಿ ನೋಡು ನಿಮ್ಮ ಪ್ರಿಯ ತಾಯಿಯು ತನ್ನ ಜೀವವನ್ನು ಸವಿಸಿ ನಿಮ್ಮನ್ನು ದೊಡ್ಡವರನ್ನಾಗಿ ಮಾಡಿದಳು. ನೀವೇ ಹೀಗೆ ಧೈರ್ಯವನ್ನು ಬಿಡಹತ್ತಿದರೆ, ಆ ಬಡಪ್ರಾಣಿಯ ಗತಿಯು ಏನಾದೀತು?"

ಸದಾಶಿವನು ದುಃಖದಿಂದ ನಡುಗುವ ಸ್ವರದಿಂದ:—ಅವ್ವನ ಸಲುವಾಗಿಯೇ ನಾನು ಶಾಲೆಯನ್ನು ಬಿಡಬೇಕಾಯಿತು ಈಗಂತು ಅವಳ ಪಕ್ಕಡಿಯಲ್ಲಿ ಅತಿ ಭಯಂಕರ ಶೂಲೆಯೆದ್ದು, ಕೈಯನ್ನು ಮೇಲಕ್ಕೆತ್ತುವಷ್ಟು ತ್ರಾಣವು ಕೂಡ ಉಳಿದಿಲ್ಲ. ನನ್ನ ಮನಸ್ಸಿ

ನಲ್ಲಿ ಮ್ಯಾಟ್ರಿಕ್‌ಪರೀಕ್ಷೆಯಲ್ಲಾದರೂ ತೇರ್ಗಡೆ ಹೊಂದಬೇಕೆಂದು ಇತ್ತು; ಅದೂ ಸಾಧಿಸಲಿಲ್ಲ. ಅವ್ವನ ಪ್ರಕೃತಿಯು ದಿನದಿನಕ್ಕೆ ಕ್ಷೀಣವಾಗುವದನ್ನು ನನ್ನ ಕಡೆಯಿಂದ ನೋಡುವದಾಗಲಿಲ್ಲ. ನಾನು ಶಾಲೆಯನ್ನು ಬಿಡುವಾಗ ನಮ್ಮ ಮಾಸ್ತರರಿಗೆ ಸಹ ಅತಿ ಕೆಡಕೆನಿಸಿತು! ಆದರೆ ಅವರಾದರೂ ಏನು ಮಾಡಿಯಾರು? ಅವರು ತಮ್ಮ ಕೈಲಾದಷ್ಟುಮಟ್ಟಿಗೆ ನಮಗೆ ಸಹಾಯ ಮಾಡಿದರು. ಕಡೆಗೆ ಶಾಲೆಯನ್ನು ಬಿಡುವ ಮುಂದೆ ಎಲ್ಲ ಹುಡುಗರ ಕಡೆಯಿಂದ ಹಣವನ್ನು ಕೂಡಿಸಿ ನನಗೆ ೫೦-೬೦ರೂಪಾಯಿಗಳನ್ನು ಮಾಡಿಕೊಟ್ಟರು. ಅದೇ ದುಡ್ಡಿನ ಮೇಲೆ ನಾವು ಇಷ್ಟು ದಿವಸಗಳವರೆಗೆ ಹ್ಯಾಗಾದರೂ ಕಾಲ ಕಳೆದೆವು; ಆದರೆ ಮೊನ್ನೆ ನಿಮ್ಮ ಪತ್ರ ಬಂದ ದಿವಸವಂತೂ ಮನೆಯಲ್ಲಿದ್ದ ಅಡಚಣೆಯ ಸ್ಥಿತಿಯನ್ನು ಹೇಳಲಳವಲ್ಲ.

"ಎಲಾ ಇವನ! ನೀನು ನನಗೆ ಹೀಗೇಕೆ ಬರೆದು ತಿಳಿಸಲಿಲ್ಲ? ನನ್ನ ಕೈಯಿಂದಾದಮಟ್ಟಿಗೆ ೮-೧೦ ರೂಪಾಯಿಗಳನ್ನು ಕಳಿಸುತ್ತಿದ್ದೆನು; ಆದರೆ ನೀವು ಅದರಂತೆ ಪತ್ರವನ್ನೆಲ್ಲಿ ಬರೆಯುವಿರಿ!"

ಹ್ಯಾಗೆ ಬರೆಯಲಿ? ನಿಮಗಾದರೂ ಅಷ್ಟು ದೊಡ್ಡ ಪಗಾರವೆಲ್ಲಿ ಬರುತ್ತದೆ? ಅವತ್ತಿನ ದಿವಸ ಸಂಜೆಯ ವರೆಗೂ ಅವರ ಸುಖ-ದುಃಖದ ಮಾತುಗಳು ನಡೆದಿದ್ದವು. ಸದಾಶಿವನ ಬಾಯಿಯಿಂದ ಅವನ ಮನೆತನದ ಸ್ಥಿತಿಯನ್ನು ಕೇಳಿ, ಶ್ರೀಪತರಾಯನು ದೊಡ್ಡ ವಿಚಾರದಲ್ಲಿ ಬಿದ್ದನು. ಯಾಕಂದರೆ ಆಗ್ಗೆ ಅವನ ಹತ್ತರ ಹತ್ತೇ ರೂಪಾಯಿಗಳು ಉಳಿದಿದ್ದವು. ಈ ತಿಂಗಳಿನಲ್ಲಿ ಅವನಿಗಾದರೂ ಸ್ವಲ್ಪ ಹೆಚ್ಚು ಖರ್ಚಾಗಿತ್ತು. ಹೆಂಡತಿಯ ಬಾಣಂತಿತನದ ವ್ಯವಸ್ಥೆ ಮಾಡಲಿಕ್ಕೆಂದು ಈ ತಿಂಗಳಲ್ಲಿ ಅವನಿಗೆ ಹನ್ನೆರಡು ರೂಪಾಯಿಗಳು ಹೆಚ್ಚು ಖರ್ಚಾಗಿದ್ದವು. ಇರಲಿ. ರಾತ್ರಿಯಲ್ಲಿ ಎಲ್ಲ ಸಾಮಾನುಗಳನ್ನು ಕಟ್ಟುವದಾದ ಮೇಲೆ ಅವರು ಮರುದಿವಸವೇ

ಹಗಲು ಹನ್ನೆರಡು ಗಂಟೆಯ ಹಡಗದಿಂದ ಮುಂಬೈಗೆ ಹೋಗ ಬೇಕೆಂದು ನಿಶ್ಚಯಿಸಿದರು. ಅದರಂತೆ ಮರುದಿವಸ ಶ್ರೀಪತರಾಯನು ಬಂದರದ ತನಕ ಹೋಗಿ ಟಿಕೀಟು ತೆಗೆದುಕೊಟ್ಟು, ಸದಾಶಿವನ ಕೈಯಲ್ಲಿ ಎಂಟು ರೂಪಾಯಿಗಳನ್ನು ಇಟ್ಟನು; ಮತ್ತು ನಾನು ನಾಳಿನ ದಿವಸವೇ ಹೊಸ ಜಾಗೆಯ ಮೇಲೆ ಹೋಗಿ ಹಾಜರಾಗುತ್ತೇನೆ ನಾಡದು ನನ್ನ ಪಗಾರವಾಗುವದು; ಆಗ್ಗೆ ನಿಮಗೆ ೨೦ ರೂಪಾಯಿಗಳನ್ನು ಕಳಿಸಿ ಉಳಿದ ೫ ರೂಪಾಯಿಗಳನ್ನು ನನ್ನ ಖರ್ಚಿಗೆ ಇಟ್ಟುಕೊಳ್ಳುವೆನು. ನಿಮಗೆ ಇದಕ್ಕೂ ಹೆಚ್ಚಿಗ ರೂಪಾಯಿಗಳು ಬೇಕಾದರೆ ಮನಸ್ಸಿನಲ್ಲಿ ಸಂದೇಹವನ್ನು ಹಿಡಿಯದೆ ಅದರಂತೆ ಸ್ಪಷ್ಟವಾಗಿ ಬರೆದು ತಿಳಿಸಿರಿ. ಅಂದರೆ ನಾನು ಏನಾದರೂ ವ್ಯವಸ್ಥೆ ಮಾಡಿ ಕಳಿಸುವೆನು. ಈಕೆಯ ಬಾಣಂತಿತನದ ದೆಸೆಯಿಂದ ನಿಮಗೆ ತೊಂದರೆಯಾಗಬಾರದೆಂದು ನನ್ನ ಪ್ರಬಲ ಇಚ್ಛೆ ಇತ್ತು; ಆದರೆ ನನಗೆ ಹಿಮ್ಮಿಂದೊಮ್ಮೆ ವರ್ಗವಾದ್ದರಿಂದ ನಿರುಪಾಯನಾಗಿದ್ದೇನೆ, ಎಂದು ಅಂದನು.

ಬೋಟು ಬಿಡುವ ವೇಳೆಯಾಗುತ್ತ ಬಂದ ಕೂಡಲೆ ಶ್ರೀಪತರಾಯರು ಎಲ್ಲ ಸಾಮಾನುಗಳನ್ನು ಅದರಲ್ಲಿ ಸರಿಯಾಗಿ ಹಿಯ್ದು ಇಟ್ಟರು ಆ ಮೇಲೆ ತಮ್ಮ ಪ್ರಿಯಪತ್ನಿಗೆ ಪ್ರಕೃತಿಯ ವಿಷಯ ಜಪ್ಪಿಸಿ ಇರಲಿಕ್ಕೆ ಮೇಲಿಂದ ಮೇಲೆ ಹೇಳಿ, ಅವನು ಅವಳಿಗೆ ಮತ್ತು ಸದಾಶಿವನಿಗೆ 'ಹೋಗಿ ಬರುತ್ತೇನೆ' ಎಂದು ಹೇಳಿದನು. ಕೂಡಲೆ ಸ್ವಲ್ಪ ಹೊತ್ತಿನಲ್ಲಿಯೇ ಬೋಟು ಬಂದರವನ್ನು ಬಿಟ್ಟು ಮುಂದೆ ಸಾಗತೊಡಗಿತು.

ಆಗ ಮಳೆಗಾಲವಿದ್ದದರಿಂದ ಬೋಟನಲ್ಲಿ ಬಹಳ ದಟ್ಟಣೆಯಾಗಿತ್ತು. ಸದಾಶಿವನು ತಮ್ಮ ಸಾಮಾನುಗಳನ್ನಿಟ್ಟ ಸ್ಥಳದಲ್ಲಿಯೇ ತನ್ನ ಅಕ್ಕನನ್ನು ಕೂಡಿಸಿದ್ದನು. ಕೆಲಹೊತ್ತಿನ ವರೆಗೆ

ಆ ಅಕ್ಕ-ತಮ್ಮಂದಿರಲ್ಲಿ ಆನಂದದ ಮಾತು-ಕಥೆಗಳು ನಡೆದಿದ್ದವು. ಲಗ್ನವಾಗಿ ಕೃಷ್ಣಾಬಾಯಿಯು ಅತ್ತೇ ಮನೆಗೆ ಹೋಗಿ ಎರಡೂವರೆ ವರ್ಷಗಳಾಗುತ್ತ ಬಂದಿದ್ದರೂ ಒಮ್ಮೆ ಸಹ ತವರುಮನೆಯನ್ನು ಕಂಡಿದ್ದಿಲ್ಲ; ಮತ್ತು ಈಗಾದರೂ ಶ್ರೀಪತರಾಯರಿಗೆ ಬೇರೆ ಸ್ಥಳಕ್ಕೆ ವರ್ಗವಾದ್ದರಿಂದ, ಅವರು ಅವಳನ್ನು ತವರುಮನೆಗೆ ಕಳಿಸಿಕೊಡ ಬೇಕಾಯಿತು. ಇಲ್ಲದಿದ್ದರೆ ಅವನೇನೂ ಕಳಿಸುತ್ತಿದ್ದಿಲ್ಲ. ತಮ್ಮ ಅತ್ತೆಯ ಮನೆಯ ಸ್ಥಿತಿಯು ಹೇಗಿರುವದೆಂಬದು ಅವನಿಗೆ ಪೂರಾ ಗೊತ್ತಿತ್ತು. ಒಮ್ಮೆ ಮಾತ್ರ ದೀವಳಿಗೆಯ ಹಬ್ಬದಲ್ಲಿ ಅವರು ಎರಡು ದಿವಸದ ರಜೆಯನ್ನು ತಕ್ಕೊಂಡು ಅವಳಿಗೆ ತವರುಮನೆಯ ವರ ಭೆಟ್ಟೀ ಕೊಡಿಸಿದ್ದರು. ತವರುಮನೆಗೆ ಬಂದಿರುವದೆಂದರೆ ಕೃಷ್ಣೆಗೆ ಇದೇ ಮೊದಲನೇ ಸಾರೆಯಾಗಿತ್ತು; ಆದರೆ ತಾನು ಹೋಗುವದರಿಂದ ಬೇನೆ ಬಿದ್ದ ತನ್ನ ಮಾವುತಿಯ ತಾಯಿಗೆ ತ್ರಾಸ ವಾಗುವದೆಂಬ ವಿಚಾರವು ಮನಸ್ಸಿಗೆ ಹೊಳೆದ ಕೂಡಲೆ ಅವಳ ಆನಂದವು ಕಡಿಮೆಯಾಗುತ್ತಿತ್ತು.

ಕೃಷ್ಣೆಯೂ, ಸದಾಶಿವನೂ ಹೊರಟು ಬಂದದರಿಂದ ಮುಂಬ ಯಿಗೆ ಮುಟ್ಟಬೇಕಾದರೆ ಎರಡು ತಾಸುಗಳ ಜಲಪ್ರವಾಸ ಮಾಡ ಬೇಕಾಗುತ್ತಿತ್ತು. ಎಷ್ಟೋ ಜನರಿಗೆ ಸಮುದ್ರದ ಪ್ರವಾಸವು ತಡೆಯುವದಿಲ್ಲ ಕೃಷ್ಣೆಯ ಹಾಡಾದರೂ ಹೀಗೆಯೇ ಆಯಿತು ಅವಳು ಮೊದಲು ಕೆಲಕಾಲ ಆನಂದದಿಂದ ಕಳೆದಳು. ಮುಂದೆ ತೀವ್ರವೇ ಅವಳ ತಲೆ ತಿರುಗತೊಡಗಿತು ಅವಳ ಹೊಟ್ಟೆಯಲ್ಲಿ ಮಳಮಳಿಸಹತ್ತಿತು ಕಣ್ಣಿಗೆ ಮೂರ್ಛೆ ಬರತೊಡಗಿತು ಇನ್ನು ಮೇಲೆ ತನಗೆ ಓಕರಿಕೆ ಬರುವದೆಂದು ಅವಳಿಗೆ ಅನಿಸಹತ್ತಿತು. ಆಗ ಅವಳು ಸದಾಶಿವನಿಗೆ ತನ್ನ ಸ್ಥಿತಿಯನ್ನು ತಿಳಿಸಿದಳು. ಅವನು ಅವಳಿಗೆ ನೀರಿನ ಕಡೆಗೆ ನೋಡದೆ, ಕಣ್ಣುಗಳನ್ನು ಮುಚ್ಚಿಕೊಂಡು

ಸುಮ್ಮನೆ ಕೂಡಲಿಕ್ಕೆ ಹೇಳಿದನು. ಈ ಮಾತಿಗೆ ಕೆಲಹೊತ್ತಾದ ಮೇಲೆ ಕೃಷ್ಣೆಗೆ ಬಹಳ ಹೊತ್ತು ತಡೆಯುವದಾಗಲಿಲ್ಲ. ಕಟ್ಟ ಕಡೆಗೆ ಅವಳು ಒಮ್ಮೆ ಕಾರಿಕೊಂಡು ಬಿಟ್ಟಳು. ಅದರ ಸಂಗಡಲೇ ಅವಳ ಹೊಟ್ಟೆಯಲ್ಲಿ ಒಂದು ಭಯಂಕರ ಶೂಲಿಯೆದ್ದು, ಅದರಿಂದ ಅವಳು ನಿಶ್ಚೇಷ್ಟಿತಳಾಗಿ ಬಿದ್ದುಬಿಟ್ಟಳು ಅದನ್ನು ಕಂಡು ಸದಾ ಶಿವನು ಗಾಬರಿಯಾದನು. ಆಗ ಅವರ ಹತ್ತಿರ ಎಷ್ಟೋ ಪ್ರವಾಸಿಕರು ಕುಳಿತಿದ್ದು, ಅವರಲ್ಲಿ ಒಬ್ಬರೂ ಮುಂದೆ ಬಂದು ಸಹಾಯ ಮಾಡಲಿಲ್ಲ ಯಾಕಂದರೆ ಕೃಷ್ಣೆಯು ಕಾರಿಕೊಂಡಲ್ಲಿಯೇ ಬಿದ್ದಿದ್ದರಿಂದ ಜನರು ಹೇಸಿಕೊಂಡು ಸನಿಯಕ್ಕೆ ಬರಲಿಲ್ಲ ಸದಾಶಿವನು ಅವಳ ಕಣ್ಣಿಗೆ ನೀರು ಹಚ್ಚಿದನು. ಕೆಲವು ವೇಳೆಯ ಮೇಲೆ ಅವಳು ಎದ್ದು ಕುಳಿತಳು; ಆದರೆ ಅವಳ ಹೊಟ್ಟೆಯಲ್ಲಿ ಬರುವ ಶೂಲೆಗಳು ಮಾತ್ರ ಕಡಿಮೆಯಾಗಲಿಲ್ಲ. ಕ್ಷಣಕ್ಷಣಕ್ಕೆ ಆ ಶೂಲೆಗಳು ಹೆಚ್ಚಾಗಹತ್ತಿದವು. ಒಂದು ಗಳಿಗೆಯ ಹಿಂದೆ, ತಾಯಿಯ ಭೆಟ್ಟಿಯ ವಿಚಾರದಿಂದ ಹಿರಿ-ಹಿರಿ ಹಿಗ್ಗಿದ ಅವಳ ಮೊಗದಾವರೆಯು ಈಗ ತೀರ ನಿಸ್ತೇಜವಾಗಿ ಕಾಣಹತ್ತಿತು ಶೂಲೆಗಳು ತಾಳಲಾರದಷ್ಟು ಕಸುವಿನಿಂದ ಏಳಹತ್ತಿದ ಕೂಡಲೆ ಅವಳು ಅಳುಮೋರೆಯಿಂದ ತನ್ನ ತಮ್ಮನಿಗೆ "ಸದಾಶಿವಾ, ಏನು ಮಾಡಲಿ? ನನ್ನ ಹೊಟ್ಟೆಯಲ್ಲಿ ಬಹಳ ಶೂಲೆಗಳು ಬರುತ್ತವೆ. ತಾಳಲಾರೆನು! ನನಗೆ ಏನೂ ತೋಚದಾಗಿದೆ" ಎಂದು ಹೇಳಿದಳು.

ಪಾಪ! ಸದಾಶಿವನಾದರೂ ಏನು ಮಾಡಿಯಾನು? ಕೃಷ್ಣೆಯಾದರೂ ಬಹು ಧೈರ್ಯದಿಂದ ಎಲ್ಲ ನೋವುಗಳನ್ನೂ ನುಂಗಿಕೊಂಡು ಕುಳಿತಿದ್ದಳು ಅಷ್ಟರಲ್ಲಿ ಅವಳಿಗೆ ಮತ್ತೊಮ್ಮೆ ವಾಂತಿಯಾಯಿತು. ಅದನ್ನು ಕಂಡು ಅಲ್ಲಿಯೇ ಕುಳಿತ ಒಬ್ಬ ಸಭ್ಯ (?) ಸ್ತ್ರೀಯು:—"ಏ ಹುಡಿಗೀ, ನಿನಗೆ ಓಕರಿಕೆ ಬಂದರೆ ಸ್ವಲ್ಪ

ಮುಂದಕ್ಕೆ ಸರಿದು ಕೂಡಬಾರದೆ? ಕೂಡುವ ಸ್ಥಳವನ್ನು ಹೊಲಸು ಮಾಡಿಬಿಟ್ಟೆ! ಇನ್ನು ನಾವೆಲ್ಲಿ ಕೂಡಬೇಕು?" ಎಂದು ಅಂದಳು.

ಕೃಷ್ಣೆಯು ಆ ಹೆಂಗಸಿಗೆ ಏನೆಂದು ಉತ್ತರ ಕೊಡುವಳು? ಅವಳದೇ ಅವಳಿಗೆ ಸಾಕು ಸಾಕಾಗಿ ಹೋಗಿತ್ತು. ಅಂದಮೇಲೆ ಉತ್ತರ ಕೊಡುವದಕ್ಕೆ ಅವಕಾಶವೆಲ್ಲಿ? ಹೊಟ್ಟೆಯಲ್ಲಿ ಏಳುತ್ತಿರುವ ಭಯಂಕರವಾದ ಜ್ವಾಲೆಗಳಿಂದ ಅವಳ ಜೀವವು ತೀರ ಗಾಬರಿ ಯಾಗಿತ್ತು. ಅವಳ ದೇಹವು ತೀರ ಹಣ್ಣಾಗಿತ್ತು ಅವಳು ಶೂಲಿ ಏಳುವ ಸ್ಥಳಗಳಲ್ಲೆಲ್ಲ ಕೈಯಿಂದ ತಿಕ್ಕುತ್ತಿದ್ದಳು ಆದರೆ ಏನು ಮಾಡಿದರೂ ಕಡಿಮೆಯಾಗಲಿಲ್ಲ! ತನ್ನ ಪ್ರಿಯಭಗಿನಿಯು ಇಂಥ ಕಷ್ಟ ಕರ ಸ್ಥಿತಿಯನ್ನು ಕಂಡು ಸದಾಶಿವನಾದರೂ ಮನಸ್ಸಿನಲ್ಲಿ ಅತಿ ಕೊರಗಹತ್ತಿದನು. ಆದರೆ ಅದಕ್ಕೆ ಅವನಾದರೂ ಏನು ಮಾಡು ವನು? ಯಾವಾಗ ಮುಂಬೈಬಂದರಕ್ಕೆ ಮುಟ್ಟೇವೆಂದು ಅವನು ಆತುರತೆಯಿಂದ ಹಾದೀ ನೋಡುತ್ತ ಕುಳಿತಿದ್ದನು. ನಡುನಡುವೆ ಅವನು ಮೋರೆಯನ್ನು ಮೇಲಕ್ಕೆತ್ತಿ ಬಹು ದೂರದ ವರೆಗೆ ನೋಡಿ ದನು. ಆದರೆ ಅಲ್ಲೇನಿದೆ? ನೀರೇ ನೀರು! ಮುಂಬಯಿ ಬಂದರ ಬರಲಿಕ್ಕೆ ಇನ್ನೂ ಅರ್ಧತಾಸಿನ ಅವಕಾಶವಿತ್ತು.

"ಸದಾಶಿವಾ, ಬಂದರವು ಯಾವಾಗ ಬರುವದು?" ಎಂದು ಕೃಷ್ಣೆಯು ಅಳುಮೋರೆಯಿಂದ ಆಗಾಗ್ಗೆ ಕೇಳುತ್ತಿದ್ದಳು ಬರ ಬರುತ್ತ ಶೂಲೆಗಳು ಅತಿ ಹತ್ತರದಿಂದ ಏಳಹತ್ತಿದ್ದರಿಂದ, ಅವಳಿಗೆ ಅವುಗಳ ವೇದನೆಯನ್ನು ತಡೆಯುವಷ್ಟು ತ್ರಾಣವುಳಿಯಲಿಲ್ಲ ಅವ ಳಿಗೆ ದಿವಸಗಳು ತುಂಬಿದ್ದವು; ಆದರೆ ಇದು ಅವಳ ಪ್ರಸೂತಿಯ ಮೊದಲನೆಯ ಪ್ರಸಂಗವಾದ್ದರಿಂದ, ತನ್ನ ಹೊಟ್ಟೆಯಲ್ಲಿ ಬರುವ ಶೂಲಿಗಳು ಯಾತರವೆಂಬದು ಅವಳಿಗೆ ತಿಳಿಯಲಿಲ್ಲ ಅವಳಿಗೆ ಇದು ತಿಳಿದಿದ್ದರೆ, ಅವಳು ಶೂಲೆಗಳು ಎದ್ದ ಕೂಡಲೆ, ಹೀಗೆ ಹೊಟ್ಟೆ

ಎಂದೂ ಹಿಚಿಕಿ ಹಿಡಿಯುತ್ತಿದ್ದಿಲ್ಲ ಆ ಬಡ ಹುಡಿಗೆಗೆ ಈ ತರದ ಅನುಭವವೇ ಇದ್ದಿಲ್ಲ! ಕಡೆಗೆ ಸಮುದ್ರದಲ್ಲಿ ಹಾರಿಯಾದರೂ ಪ್ರಾಣತ್ಯಾಗ ಮಾಡಬೇಕೆಂಬ ವಿಚಾರವು ಅವಳ ಮನಸ್ಸಿನಲ್ಲಿ ಬಂತು ಅವಳು ತೀರ ಭ್ರಮಿಷ್ಠಳಾದಳು ಅಯ್ಯೋ! ಬಡಕೃಷ್ಣೆಯೇ! ನಿನ್ನ ಮೇಲೆ ಎಂಥ ದುರ್ಧರ ಪ್ರಸಂಗ ಬಂದಿರುವದು?

ಮುಂಬಯಿಬಂದರವು ಕಾಣತೊಡಗಿತು. ಎಲ್ಲ ಪ್ರವಾಸಿಕರು ಇಳಿಯಲಿಕ್ಕೆ ನಾಮುಂದೆ, ನಾಮುಂದೆ ಎಂದು ಗದಭೆಯನ್ನು ಮಾಡ ಹತ್ತಿದರು. ಈಗ ಕೃಷ್ಣೆಯ ಮನಸ್ಸಿಗೆ ಸ್ವಲ್ಪ ಧೈರ್ಯವುಂಟಾ ಯಿತು. ಆದರೂ ಆಕೆಯ ಕೂಲೆಗಳೇನೂ ನಿಂತಿದ್ದಿಲ್ಲ ಕಡೆಗೆ ಹಿಮ್ಮೆ ಆ ಬೋಟು ಮುಂಬಯಿಯ ಬಂದರಕ್ಕೆ ಬಂದು ನಿಂತಿತು. ಪ್ರತಿಯೊಬ್ಬನು ತಾನು ಮುಂದೆ ಇಳಿಯಬೇಕೆಂದು ಪ್ರಯತ್ನಿಸ ಹತ್ತಿದನು. ಎಲ್ಲ ಪ್ರಯಾಣಿಕರು ಇಳಿದು ಹೋದ ಮೇಲೆ, ಸದಾ ಶಿವನು ಅಕ್ಕನ ಕೈಹಿಡಿದು ಸಾವಕಾಶವಾಗಿ ಬಂದರದ ಮೇಲೆ ಇಳಿಸಿಕೊಂಡನು ಆಕೆಗೆ ಈಗ ನಡೆದಾಡುವ ತ್ರಾಣವು ಕೂಡ ಉಳಿದಿದ್ದಿಲ್ಲ. ಬಹಳ ಹೈರಾಣಾಗಿದ್ದಳು. ದಂಡೆಯ ಮೇಲೆ ಕಾಲಿಟ್ಟ ಕೂಡಲೆ ಆವಳು ಅಲ್ಲಿಯೇ ನೆಲಹಿಡಿದು ಕುಳಿತು ಬಿಟ್ಟಳು. ಸದಾಶಿವನು ಆ ಮೇಲೆ ತನ್ನ ಸಾಮಾನುಗಳನ್ನು ಬೋಟನಿಂದ ಇಳಿಸಿಕೊಂಡು ಬಂದರದ ಹೊರಗೆ ತಂದಿಟ್ಟನು; ಮತ್ತು ಒಬ್ಬ ವ್ಹಿಕ್ಟೋರಿಯಾ ಗಾಡಿಯವನನ್ನು ಕರೆದನು ತಾವು ಅಲ್ಲಿಂದ ನೆಟ್ಟಗೆ ಬೋರಿಬಂದರ ಸ್ಟೇಶನ್ನಕ್ಕೆ ಹೋದರೆ ಅಲ್ಲಿ ಸಾಮಾನುಗಳ ನ್ನೆಲ್ಲ ಸರಿಯಾಗಿ ಗಾಡಿಯಲ್ಲಿ ಹಾಕಿ ಆ ಮೇಲೆ ಅಕ್ಕನನ್ನು ರೈಲುಗಾಡಿ ಯಲ್ಲಿ ಸಾವಕಾಶವಾಗಿ ಕೂಡಿಸಿಕೊಂಡು ಹೋದರಾಯಿತೆಂದು ನೆನಿಸಿ, ಅವನು ವ್ಹಿಕ್ಟೋರಿಯಾದವನಿಗೆ, ಬೋರಿಬಂದರದ ವರೆಗೆ ಏನು ತಕ್ಕೊಳ್ಳುವಿ? ಎಂದು ಕೇಳುವವನಿದ್ದನು ಅಷ್ಟರಲ್ಲಿಯೇ

ಕೃಷ್ಣೆಯು "ಸದಾಶಿವಾ, ಇನ್ನು ನೀನು ನನ್ನನ್ನು ಎಲ್ಲಿಗೆ ಕರೆದು ಕೊಂಡುಹೋಗುವಿ? ಎಂದು ಕೇಳಿದಳು.

"ಬೋರೀ ಬಂದರಕ್ಕೆ—ಅಲ್ಲಿಂದ ರೈಲುಗಾಡಿಯಲ್ಲಿ ಕುಳಿತು ದಾದರಕ್ಕೆ ಇಳಿದು ಮುಂದೆ ಒಂದು ಎಕ್ಕಾಗಾಡಿ ಮಾಡಿಕೊಂಡು ಹೋಗೋಣವಂತೆ."

"ಸದಾಶಿವಾ, ಇನ್ನು ಮೇಲೆ ಮಾತ್ರ ನಾನು ಗಾಡಿ ಹತ್ತುವ-ಇಳಿಯುವ ತ್ರಾಸವನ್ನು ತಡೆಯುವಂತಿಲ್ಲ! ನಾನು ಇನ್ನು ಈ ಬೇನೆಗಳನ್ನು ಸಹಿಸಲಾರೆನು!!"

"ಅಕ್ಕಾ, ಹಾಗಾದರೆ ಇನ್ನು ಏನು ಮಾಡಬೇಕೆಂದಿರುವಿ? ಹೇಳು."

ಗಾಡಿಯವನು, ಈ ಅಕ್ಕ-ತಮ್ಮಂದಿರ ಮಾತುಗಳನ್ನು ಕೇಳು ತ್ತಲೇ ಇದ್ದನು. ಕೃಷ್ಣೆಯು ಹೊಟ್ಟೆಯಲ್ಲಿ ಬರುವ ಬೇನೆಗಳನ್ನು ತಾಳಲಾರದೆ ಆಗಾಗ್ಗೆ ಮೈಮುರಿದುಕೊಳ್ಳುತ್ತಿದ್ದುದನ್ನು ನೋಡಿ, ಆ ಹುಡಿಗಿಗೆ ಏನಾದರೂ ಬಹಳ ವೇದನೆಯಾಗುತ್ತಿರಬಹುದೆಂದು ಅವನು ತರ್ಕಿಸಿದನು ಗಾಡಿಯುವನು ಮರಾಟಾಜಾತಿಯವ ನಿದ್ದು, ಸುಸ್ವಭಾವದ ಮನುಷ್ಯನಿದ್ದನು. ಅವನು ಸದಾಶಿವನಿಗೆ: 'ನೀವು ಎಲ್ಲಿಗೆ ಹೋಗಬೇಕಾಗಿದೆ?' ಎಂದು ಕೇಳಿದನು.

"ದಾದರಕ್ಕೆ."

"ಹಾಗಾದರೆ ಗಾಡಿಯಲ್ಲಿ ಕುಳಿತುಕೊಳ್ಳಿರಿ. ನಾನು ಈ ಬಾಯಿಯವರಿಗೆ ಆಯಾಸವಾಗದಂತೆ ಸಾವಕಾಶವಾಗಿ ವ್ಯವಸ್ಥಿತ ರೀತಿಯಿಂದ ಮುಟ್ಟಿಸುವೆನು."

"ನೀನು ಬಾಡಿಗೆಯನ್ನೇನು ತಕ್ಕೊಳ್ಳುವಿ?"

"ನನ್ನ ಬಾಡಿಗೆಯು ಎರಡು ರೂಪಾಯಿ; ಇದರ ಮೇಲೆ ನೀವು ಸಂತೋಷದಿಂದ ಕೊಟ್ಟದ್ದನ್ನು ನಾನು ತಕ್ಕೊಳ್ಳುವೆನು.

ಹೂ, ಕುಳಿತುಕೊಳ್ಳಿರಿ ನೋಡಿರಿ, ಪಾಪ! ಬಾಯಿಯುವರಿಗೆ ನೆಟ್ಟಗೆ ಕುಳಿತುಕೊಳ್ಳಲಿಕ್ಕೆ ಸಹ ಬರಲೊಲ್ಲದು!'' ಕೃಷ್ಣೆಯ ಈ ಕರುಣಾಜನಕಸ್ಥಿತಿಯನ್ನು ಕಂಡು ಗಾಡಿಯುವನ ಮನಸ್ಸು ಕೂಡಾ ಕರಗಿತು. ಅಂದಮೇಲೆ ಅವಳಿಗೆ ಎಂಥ ವೇದನೆಯಾಗುತ್ತಿರಬಹು ದೆಂಬ ಕಲ್ಪನೆಯನ್ನು ವಾಚಕರೇ ಮಾಡಬೇಕು!

ಗಾಡಿಯಲ್ಲಿ ಕುಳಿತುಕೊಳ್ಳುವಾಗ ಕೃಷ್ಣೆಯು ಗಾಡಿಯುವ ನಿಗೆ:— ''ಅಪ್ಪಾ ಈಶ್ವರನು ನಿನಗೆ ಕಲ್ಯಾಣ ಮಾಡಲಿ!'' ಎಂದು ಅಂತಃಕರಣಪೂರ್ವಕವಾಗಿ ಗದ್ಗದಿತಸ್ವರದಿಂದ ನುಡಿದಳು.

ಗಾಡಿಯುವನು ಒಳ್ಳೇ ಜಾಣತನದಿಂದ ಗಾಡಿಯನ್ನು ಹೊಡೆ ದನು. ದಾರಿಯಲ್ಲಿಯ ತಗ್ಗು-ದಿನ್ನೆಗಳನ್ನೂ, ಕಲ್ಲುಗಳನ್ನೂ ತಪ್ಪಿಸಿ, ಕೃಷ್ಣೆಗೆ ತೊಂದರೆಯು ಆಗದಂತೆ ಆದಷ್ಟು ಲಗುಬಗೆಯಿಂದ ಗಾಡಿಯನ್ನು ಹೊಡೆದನು. ಕೃಷ್ಣೆಯು ಒಳಗೆ ಕುಳಿತ ಕೂಡಲೆ ತನ್ನ ಎರಡೂ ಕಾಲುಗಳನ್ನು ಮೇಲಕ್ಕಿಟ್ಟುಕೊಂಡು ಹೊಟ್ಟೆಗೆ ಗಟ್ಟಿಯಾಗಿ ಹತ್ತಿಕ್ಕಿಕೊಂಡಳು ಮನೆಗೆ ಮುಟ್ಟುವ ವರೆಗೆ ಅವಳು ಹಾಗೆಯೇ ಕುಳಿತಿದ್ದಳು ಒಂದು ತಾಸಿನೊಳಗೇ ಗಾಡಿಯು ದಾದರಕ್ಕೆ ಬಂದು ಮುಟ್ಟಿತು. ಮನೆಯು ಕಣ್ಣಿಗೆ ಬಿದ್ದ ಕೂಡಲೆ ಅವರಿಬ್ಬರಿಗೂ ಅತ್ಯಾನಂದವಾಯಿತು; ಆದರೆ ಆ ಸಂತೋಷವು ಬಹಳ ಹೊತ್ತಿನ ವರೆಗೆ ಉಳಿಯಲಿಲ್ಲ. ಮನೆಯ ಬಾಗಿಲಿಗೆ ಗಾಡಿಯು ಬಂದು ನಿಂತ ಕೂಡಲೆ ಸಾವಿತ್ರಿಯು:— ''ಅಕ್ಕನು ಬಂದಳು!'' ಎಂದು ಒದರುತ್ತ ಹೊರಗೆ ಬಂದು ನಿಂತಳು; ಗಾಡಿ ಯಿಂದಿಳಿದ ಕೂಡಲೆ ಸದಾಶಿವನು ಗಾಡಿಯುವನಿಗೆ ಎರಡು ರೂಪಾ ಯಿಗಳನ್ನು ಕೊಡಹೋದನು; ಆದರೆ ಅವನು ಒಂದೇ ರೂಪಾಯಿ ಇಸಕೊಂಡು ಮತ್ತೊಂದನ್ನು ತಿರುಗಿ ಕೊಟ್ಟನು. ಇತ್ತ ಕೃಷ್ಣೆಯು ಸಾವಿತ್ರಿಯ ಹೆಗಲ ಮೇಲೆ ಒಂದು ಕೈಯನ್ನಿಟ್ಟು ಸಾವಕಾಶವಾಗಿ

ಗಾಡಿಯಿಂದಿಳಿದಳು. ಆಗ ಅವಳು ಅತಿ ದೀನಸ್ಥಿತಿಯಲ್ಲಿದ್ದಳು. ಅಸಹ್ಯಕರವಾದ ವೇದನೆಗಳಿಂದ ಅವಳ ಅರ್ಧ ಅರಿವೇ ಹಾರಿದಂತಾಗಿತ್ತು. ಹಾಗೂ ಹೀಗೂ ಮಾಡಿ ಅವಳು ತಲೆಬಾಗಿಲದವರೆಗೆ ಬಂದು ಮುಟ್ಟಿದಳು; ಮತ್ತು ಆಯಾಸದಿಂದ ಒಳಗೆ ಹೋದಳು. ಅವಳು ಒಳಗೆ ಬಂದ ಕೂಡಲೆ ಭಾಗೀರಥಿದೇವಿಯು ಹೊರಸಿನ ಮೇಲೆ ಎದ್ದು ಕುಳ್ಳಿರಬೇಕೆಂದು ಪ್ರಯತ್ನಿಸಹತ್ತಿದಳು. ಅಷ್ಟರೊಳಗೇ ಕೃಷ್ಣೆಯು 'ಅವ್ವಾ' ಎಂದು ಎರಡು ಸಾರೆ ಒದರಿ ನಿಂತಲ್ಲಿಯೇ ಎಚ್ಚರದಪ್ಪಿ ದೊಪ್ಪನೆ ಬಿದ್ದುಬಿಟ್ಟಳು!

## ೫ನೆಯ ಪ್ರಕರಣ.



## ಕಠಿಣವಾದ ಕುತ್ತು.



ಸದಾಶಿವನು ತನ್ನ ಅಕ್ಕನನ್ನು ಕರೆಯಲಿಕ್ಕೆ ಹೋದ ಮೇಲೆ ಭಾಗೀರಥಿದೇವಿಯು ಸಾವಿತ್ರಿಯನ್ನು ಕಳುಹಿ, ತಮ್ಮ ನೆರೆಯ ದುರ್ಗಾದೇವಿಯನ್ನು ಕರೆಸಿದಳು; ಮತ್ತು ಅವಳು ಬಂದ ಮೇಲೆ ಅವಳಿಗೆ ತನ್ನ ನಿಜಸ್ಥಿತಿಯನ್ನು ತಿಳಿಸಿ ಹೇಳಿದಳು. ಅದನ್ನು ಕೇಳಿ, ದುರ್ಗಾದೇವಿಯು:- 'ಭಾಗೀರಥಿದೇವೀ, ಇದೇನು ದೊಡ್ಡ ಮಾತು? ಇಂಥ ವೇಳೆಯಲ್ಲಿ ನೆರವಾಗದೆ ಮತ್ಯಾವ ವೇಳೆಯಲ್ಲಿ? ಇದನ್ನು ಮಾಡದಿದ್ದರೆ ನೆರೆಹೊರೆಯವರ ಕರ್ತವ್ಯವಾವುದು? ಇದರ ವಿಷಯವಾಗಿ ನೀವು ನಿಶ್ಚಿಂತೆಯಿಂದ ಇರ್ರಿ. ನಾನು ಇದ್ದೇನೆ; ಆ ಬಾಜೂನೆ ಅವ್ವನಿದ್ದಾಳೆ; ಮತ್ತು ಅವರ ದಿನಹೋದ ಅಮ್ಮನೂ ಇದ್ದಾಳೆ. ಆ ಮುದುಕಿಯಂತೂ ಒಳ್ಳೇ ಪ್ರೌಢ ಮತ್ತು ಅನುಭವವುಳ್ಳವ

ಳಿದ್ದಾಳೆ; ಅಂದಮೇಲೆ ನೀವು ಚಿಂತೆ ಮಾಡುವದೇಕೆ?’ ಎಂದು ಅಂದಳು

“ಹಾಗಲ್ಲರೆವ್ವಾ, ನಾನಂತೂ ಬೇನೆಯಿಂದ ಕೈಲಾಗದವಳಾಗಿ ಬಿದ್ದಿದ್ದೇನೆ. ನನ್ನ ಪಕ್ಕಡಿಯಲ್ಲಿ ಏಳುವ ಶೂಲಿಗಳು ಕಡಿಮೆಯಾಗಿದ್ದರೆ ನನಗೇನೂ ಕಾಳಜಿ ಇದ್ದಿದ್ದಿಲ್ಲ; ಆದರೆ ಏನು ಮಾಡಲಿ? ನನಗೆ ಮಗ್ಗಲಾಗಿ ಮಲಗಲಿಕ್ಕೆ ಕೂಡ ತ್ರಾಣವಿಲ್ಲದಾಗಿದೆ ಇದಲ್ಲದೆ ಈ ಸಾರೆ ಆ ಹುಡಿಗೆಯು ಬಾಣಂತಿತನವು ಮೊದಲನೇದು. ಅಂತೇ ನನಗೆ ಇಷ್ಟು ಯೋಚನೆ ಎನಿಸಿದೆ!”

“ಏನೂ ಯೋಚಿಸಬೇಡಿರಿ. ನಿಮ್ಮ ಕೃಷ್ಣೆಯೆಂದರೆ ನಮಗೆ ಬೇರೆಯೇ! ನಮ್ಮ ಕಣ್ಣು ಮುಂದೆಯೇ ಅವಳು ಬೆಳೆದು ದೊಡ್ಡವಳಾಗಿದ್ದಾಳೆ. ಹೀಗಿರಲಾಗಿ ಅವಳಿಗೆ ನಾವು ಮಾಡದೆ ಮತ್ಯಾರು ಮಾಡಬೇಕು?”

ದುರ್ಗಾದೇವಿಯು ಈ ಮಾತುಗಳನ್ನು ಕೇಳಿ, ಭಾಗೀರಥಿ ದೇವಿಗೆ ಒಳ್ಳೇ ಸಮಾಧಾನವುಂಟಾಯಿತು. ಅವಳ ದೊಡ್ಡ ಚಿಂತೆಯು ಹೊರೆಯು ಇಳಿದಂತಾಗಿ ಮನಸ್ಸಿನ ದುಗುಡವು ಕಡಿಮೆಯಾಯಿತು ಆದರೂ ಬಾಣಂತಿಯ ಪಥ್ಯ-ನೀರುಗಳ ಕೆಲಸವು ಚಿಕ್ಕವಳಾದ ಸಾವಿತ್ರಿಯು ಕಡೆಯಿಂದ ನೀಗುವದೋ-ಇಲ್ಲವೋ ಎಂಬದೊಂದು ವಿಚಾರವು ಮಾತ್ರ ಅವಳ ಮನಸ್ಸಿನಲ್ಲಿ ಉಳಿಯಿತು. ಭಾಗೀರಥಿದೇವಿಯು ಬೇನೆ ಬಿದ್ದು ಒಂದು ವರ್ಷವಾಗಿತ್ತು. ಈ ಅವಧಿಯುಲ್ಲಿ ಎಲ್ಲ ಮನೆಗೆಲಸವನ್ನು ಸಾವಿತ್ರಿಯೇ ಮಾಡುತ್ತಿದ್ದಳು ಅವಳಿಗೆ ವಯಸ್ಸೇನೂ ಬಹಳವಾಗಿದ್ದಿಲ್ಲ. ಆಗ್ಗೆ ಅವಳಿಗೆ ಬರೇ ಹನ್ನೆರಡು ವರ್ಷಗಳಾಗಿದ್ದವೆಂಬದು ವಾಚಕರಿಗೆ ಗೊತ್ತೇ ಇರುವದು ವಯೋಮಾನದಿಂದ ನೋಡಲಾಗಿ ಆ ಹುಡಿಗೆಯು ಬಲು ಜಾಣಳೂ, ತಿಳುವಳಿಕೆಯುಳ್ಳವಳೂ, ಉದ್ಯೋಗಿಯೂ ಆಗಿ

ದ್ದಳು. ಅವಳು ಕಸ, ಮುಸುರೆ, ಎರಡೂ ಹೊತ್ತಿನ ಅಡಿಗೆಗಳನ್ನು ಮಾಡುವದಲ್ಲದೆ, ಬೇನೆ ಬಿದ್ದ ತನ್ನ ತಾಯಿಯ ಆರೈಕೆಯನ್ನು ಕೂಡ ಮಾಡುತ್ತಿದ್ದಳು.

ಇವತ್ತಿನ ತನ್ನ ಎಲ್ಲ ಕೆಲಸಗಳನ್ನು ಅವಳು ಬಲು ಹುರುಪಿನಿಂದ ಮಾಡಿದಳು ಅವಳು ಆಗಾಗ್ಗೆ ತನ್ನ ತಾಯಿಗೆ ಬೇರೆ ಬೇರೆ ಪ್ರಶ್ನೆಗಳನ್ನು ಕೇಳುತ್ತಿದ್ದಳು "ಅವ್ವಾ, ಈ ಮೂಲೆಯೊಳಗೆ ಅಕ್ಕನಿಗೆ ಪ್ರಸೂತಳಾಗಲಿಕ್ಕೆ ಚಲೋ ಜಾಗೆ ಇರುವದು! ಅವ್ವಾ, ನಾನು ಇಲ್ಲಿ ಹೀಗೆ ಒಂದು ಅಡ್ಡ ಪಡದೆ ಕಟ್ಟುವೆನು; ಅಂದರೆ ಇದೊಂದು ಬಾಣಂತಿಯ ಕೋಣೆಯಾಗುವದು. ಅವ್ವ ಬಾಣಂತಿಯ ಕೂಸಿಗೆ ಎರೆಯಲಿಕ್ಕೆ ನಾನೇ ನೀರು ಹಾಕುವೆನು" ಇವೇ ಮೊದಲಾದ ಅನೇಕ ಪ್ರಶ್ನೆಗಳನ್ನು ಮಾಡುತ್ತಿದ್ದಳು. ಭಾಗೀರಥಿ ದೇವಿಯು ಅವಳಿಗೆ 'ಹೂ-ಹೂ' ಎಂದು ಉತ್ತರ ಕೊಡುತ್ತಿದ್ದಳು. ಆದರೆ ಅವಳ ಲಕ್ಷ್ಯವೆಲ್ಲ ಮಗಳ ಬಾಣಂತಿತನದ ಕಡೆಗೇ ಇತ್ತು.

ಹಗಲಹೊತ್ತು, ಎರಡು ಬಡಿಯುವ ವೇಳೆಯಾಗಿತ್ತು. ಇಷ್ಟರೊಳಗೇ ಹುಡುಗರು ಊರಿಂದ ಬರುವರೆಂದು ಭಾಗೀರಥಿದೇವಿಗೆ ನಂಬಿಗೆ ಇತ್ತು; ಆದರೆ ಮೂರು ಹೊಡೆದರೂ ಹುಡುಗರು ಬರುವ ಲಕ್ಷಣವೇ ತೋರಲಿಲ್ಲ. ಸಾವಿತ್ರಿಯು ಮಾತ್ರ ಒಳಗಿಂದ ಹೊರಗೆ ಹೊರಗಿನಿಂದ ಒಳಗೆ ಎಷ್ಟೋ ಸಾರೆ ಎಡತಾಕುತ್ತಿದ್ದಳು ಅಕ್ಕನೂ ಅಣ್ಣನೂ ಯಾವಾಗ್ಗೆ ಬರುವರೆಂದು ಅವಳಿಗೆ ಆತುರತೆಯುಂಟಾಗಿತ್ತು. ಕೂಡಲೆ ಭಾಗೀರಥಿದೇವಿಗೆ ಹುಡುಗನು ಬಹಳ ದಿವಸಕ್ಕೆ ಹೋದದ್ದರಿಂದ, ಅಳಿಯಂದಿರು ಒಂದು ದಿವಸ ಹೆಚ್ಚಿಗೆ ಇಟ್ಟುಕೊಂಡಿರಬಹುದೆಂದು ಅನಿಸಹತ್ತಿತು. ಅವಳ ಮನಸ್ಸಿನಲ್ಲಿ ಈ ವಿಚಾರವು ಬರುವದರೊಳಗೇ ವ್ಹಿಕ್ಟೋರಿಯಾ ಬಂಡಿಯು 'ಗಡಗಡನೆ' ಸಪ್ಪಳ ಮಾಡುತ್ತ ಬಾಗಿಲ ಮುಂದೆ ಬಂದು ನಿಂತಿತು.

ಕೂಡಲೆ ಸಾವಿತ್ರಿಯು ಅಕ್ಕನು ಬಂದಳೆಂದು ಹಿಗ್ಗುತ್ತ ಹೊರಗೆ ಓಡುತ್ತ ಬಂದು ನಿಂತಳು. ಭಾಗೀರಥಿದೇವಿಯಾದರೂ ಮಗಳು ಬಂದ ಸುದ್ದಿ ಕೇಳಿ ಎದ್ದು ಕೂಡ್ರಲಿಕ್ಕೆ ಪ್ರಯತ್ನ ಮಾಡಹತ್ತಿದಳು. ಅಷ್ಟರಲ್ಲಿಯೇ ಕೃಷ್ಣೆಯು ಸಾವಿತ್ರಿಯು ಹೆಗಲಮೇಲೆ ಕೈಯಿಟ್ಟು ಮೆಲ್ಲಗೆ ಅಲ್ಲಿಗೇ ಬಂದಳು ಆಗ ಅವಳು ಎಂಥ ಸ್ಥಿತಿಯಲ್ಲಿದ್ದಳೆಂಬದನ್ನು ಹಿಂದಿನ ಪ್ರಕರಣದಲ್ಲಿಯೇ ವರ್ಣಿಸಿದ್ದೇವೆ. "ಮಗಳೇ ಬಂದೆಯಾ?" ಎಂದು ಭಾಗೀರಥಿದೇವಿಯು ಅನ್ನುವದಕ್ಕೂ ಮತ್ತು ಪಡಸಾಲೆಯಲ್ಲಿಯೇ ಕೃಷ್ಣೆಯು ಎಚ್ಚರದಪ್ಪಿ ಬೀಳುವದಕ್ಕೂ ಗಂಟೇ ಬಿತ್ತು.

ಭಾಗೀರಥೀದೇವಿಯು ಹೌಹಾರಿ ಹೊರಸಿನ ಮೇಲಿಂದ ಹಿಮ್ಮೊಂದೊಮ್ಮೆ ಎದ್ದಳು, ಹೀಗೆ ಮಾಡಿದ ಕೂಡಲೆ ಅವಳು ಜೋಲಿ ಹೋಗಿ ನೆಲಕ್ಕೆ ಬೀಳತಕ್ಕವಳು; ಆದರೆ ಅಷ್ಟರಲ್ಲಿಯೇ ಅವಳು ಜೋಲಿಯನ್ನು ತಡೆದು ನೆಲದ ಮೇಲೆ ಕೈಯೂರಿದಳು. ಅಕ್ಕನು ಬಿದ್ದದ್ದನ್ನು ನೋಡಿ ಸಾವಿತ್ರಿಯು ಚೀರಿದಳು. ನೆರೆಮನೆಯ ದುರ್ಗಾಬಾಯಿಯು ಓಡಿ ಬಂದಳು. ಬೇರೆ ಹೆಂಗಸರೂ ಬಂದರು. ಅವರು ಕೃಷ್ಣೆಯನ್ನು ಎಳೆಯುತ್ತ ಕೋಣೆಗೆ ಒಯ್ದು, ಸೀರೆಯ ಗಂಟನ್ನು ಬಿಚ್ಚಿ ನೋಡಿದರು; ಹಾಗು ತಿಳಿದ ಮಟ್ಟಿಗೆ ಉಪಚರಿಸಿದರು. ಅದರಿಂದ ಕೃಷ್ಣೆಗೆ ಎಚ್ಚರ ಹುಟ್ಟಿತು; ಆದರೆ ಕೂಸು ಅಡ್ಡ ಸಿಕ್ಕದ್ದರಿಂದ ಬೇನೆ ಕಟ್ಟಾಗಿ ವ್ಯಥೆಪಡಲಾರಂಭಿಸಿದಳು. ಆಗ ದುರ್ಗಾದೇವಿಯು ಹೊರಗೆ ಬಂದು ಡಾಕ್ಟರರನ್ನು ಕರೆಯಲು ಸದಾಶಿವನಿಗೆ ಸೂಚಿಸಿದಳು ಕೂಡಲೆ ಸದಾಶಿವನು ಬಾಣ ಬಿಟ್ಟಂತೆ ಓಡಿದನು. ಅವನು ರಾವಬಹಾದರಕರರ ದವಾಖಾನೆಗೆ ಹೋಗಿ ನೋಡಲು ಅವರು ಅಲ್ಲಿ ಇದ್ದಿಲ್ಲ. ಅವರು ಒಬ್ಬ ಮಹತ್ವದ ರೋಗಿಯನ್ನು ನೋಡಲಿಕ್ಕೆ ಪರವೂರಿಗೆ ಹೋಗಿದ್ದರು. ಡಾಕ್ಟ

ರರು ಬರಲಿಕ್ಕೆ ಏನಿಲ್ಲೆಂದರೂ ಇನ್ನೂ ಎರಡು ತಾಸು ಬೇಕು, ಎಂದು ಕಂಪಾವುಂಡರನು ಹೇಳಿದ ಕೂಡಲೆ ಸದಾಶಿವನು ಹೆಚ್ಚೇ ವಿಚಾರಕ್ಕೊಳಗಾದನು. ಇಷ್ಟರಲ್ಲಿ ಅದರಾಚೆಯ ಓಣಿಯಲ್ಲಿ ಹೆಬ್ಬ ಕ್ರಿಶ್ಚನ್ ಡಾಕ್ಟರನು ದವಾಖಾನೆ ಹಾಕಿದ್ದು ಅವನಿಗೆ ನೆನಪಾಯಿತು. ಆದ್ದರಿಂದ ಅವನು ಅತ್ತ ಕಡೆಗೆ ಹೊರಟನು. ಡಾ. ರಾಡ್ರಿಕ್ಸನು ತನ್ನ ದವಾಖಾನೆಯಲ್ಲಿ ವರ್ತಮಾನ ಪತ್ರವನ್ನು ಓದುತ್ತ ಕುಳಿತಿದ್ದನು. ಈ ಡಾಕ್ಟರನು ಹೊಸದಾಗಿ ಪಾಸಾಗಿದ್ದು ದವಾಖಾನೆಯನ್ನು ಹಾಕಿ ಐದೇ ತಿಂಗಳುಗಳಾಗಿದ್ದವು ಸದಾಶಿವನು ಲಗುಬಗೆಯಿಂದ ದವಾಖಾನೆಯ ಪಾವಟಿಗೆಗಳನ್ನು ಹತ್ತಿ ಬರುವದನ್ನು ಕಂಡು ಡಾಕ್ಟರನು ಕೈಯೊಳಗಿನ ವರ್ತಮಾನ ಪತ್ರವನ್ನು ಕೆಳಗಿಟ್ಟನು ಸದಾಶಿವನು ಮುಂದಕ್ಕೆ ಬಂದು ಮೇಜಿನ ಹತ್ತಿರ ನಿಂತನು. ಹಿಂದೇ ಸವನೆ ಓಡುತ್ತ ಬಂದದ್ದರಿಂದ ಅವನು ದಣಿದು ತೇಕುತ್ತಿದ್ದನು. ಇದಲ್ಲದೆ ಅವನಿಗೆ ಏನು ಮಾತಾಡಬೇಕೆಂಬದು ತಿಳಿಯದೆ, ಅಲ್ಲಿಯೇ ಸುಮ್ಮನೆ ತೇಕುತ್ತ ನಿಂತುಬಿಟ್ಟನು! ಇದನ್ನು ಕಂಡು ಡಾಕ್ಟರನು—'ಎಲೋ, ನಿನಗೇನು ಬೇಕು?' ಎಂದು ಕೇಳಿದನು "ಡಾಕ್ಟರ ಸಾಹೇಬರೇ, ನಾನು ತಮ್ಮನ್ನು ಕರೆಯಲಿಕ್ಕೆ ಬಂದಿದ್ದೇನೆ. ಹೆಬ್ಬ ಸ್ತ್ರೀಗೆ ಅಂದರೆ ನಮ್ಮ ಅಕ್ಕನಿಗೆ ಕೂಸು ಅಡ್ಡ ಸಿಕ್ಕು ಪ್ರಸೂತಿಗೆ ಅಡ್ಡಿಯುಂಟಾಗಿದೆ. ನಡೆಯಿರಿ. ಡಾಕ್ಟರಸಾಹೇಬರೇ, ನಾನು ತಮ್ಮ ಫೀ ಕೊಡುತ್ತೇನೆ" ಎಂದು ಅಂದನು.

ಇದನ್ನು ಕೇಳಿದೊಡನೆ ಡಾಕ್ಟರರು ಖುರ್ಚಿಯಿಂದ ಮೇಲಕ್ಕೇಳುವ ವಿಚಾರದಲ್ಲಿದ್ದರು; ಆದರೆ ಇಷ್ಟರಲ್ಲಿಯೇ ಅವರ ವಿಚಾರವು ಬದಲಾಯಿತು 'ಕೂಸು ಅಡ್ಡ ಸಿಕ್ಕಿದೆ' ಅಂದಮೇಲೆ ಬಹಳ ಕಠಿಣವಾದ ಕೇಸು ಇರುತ್ತದೆ! ನಾನು ಇದುವರೆಗೆ ಇಂಥ

ಕೇಸನ್ನು ಒಮ್ಮೆಯಾದರೂ ಔಷಧೋಪಚಾರ ಮಾಡಿ ನೆಟ್ಟಗೆ ಮಾಡಿಲ್ಲ. ಅಂದಮೇಲೆ ಈ ಮೊದಲಿನ ಬಾರೆಯೇ ನನಗೆ ಅಪಯಶ ಬಂದರೆ. ಜನರು ನನ್ನ ಕೈ ಗುಣಕ್ಕೆ ಹೆಸರಿಡದೆ ಬಿಡರು; ಮತ್ತು ನಾನು ಹೊಸದಾಗಿ ಸುರುವು ಮಾಡಿದ ನನ್ನ ಉದ್ಯೋಗಕ್ಕೆ ಇದರಿಂದ ಪೆಟ್ಟು ತಗಲದೆ ಇರದು! ಎಂಬ ವಿಚಾರಗಳು ಮನದಲ್ಲಿ ಬಂದು ಅವರು ಮತ್ತೆ ಖುರ್ಚಿಯ ಮೇಲೆ ಗಟ್ಟಿಯಾಗಿ ಕುಳಿತರು. ಡಾಕ್ಟರರು ಏಳದೆ ಇದ್ದದ್ದನ್ನು ನೋಡಿ ಸದಾಶಿವನು ದೀನ ಸ್ವರದಿಂದ "ಡಾಕ್ಟರಸಾಹೇಬರೇ ಹೊತ್ತಾಗುತ್ತದೆ, ದಯಮಾಡಿ ನಡೆಯಿರಿ" ಎಂದು ಮತ್ತೆ ಅಂಗಲಾಚಿ ಬೇಡಿಕೊಂಡನು.

"ಹೂ, ಒಳ್ಳೇದು; ಆದರೆ ಅವಳಿಗೆ ಕೂಸು ಅಡ್ಡಸಿಕ್ಕು ಎಷ್ಟು ಹೊತ್ತಾಯಿತು?"

ಸದಾಶಿವನು ಸ್ವಲ್ಪದರಲ್ಲಿಯೇ ಎಲ್ಲ ಸಂಗತಿಯನ್ನು ತಿಳಿಸಿ ಹೇಳಿದನು ಆಗಂತೂ ಡಾ. ಸಾಹೇಬರು ಅಲ್ಲಿಗೆ ಹೋಗಬಾರದೆಂದೇ ನಿಶ್ಚಯಿಸಿದರು; ಯಾಕಂದರೆ ಕೇಸು ನಿಜವಾಗಿ ಕಠಿಣವಿದ್ದದರಿಂದ, ಅದರಲ್ಲಿ ಯಶಸ್ಸು ದೊರೆಯಲಿಕ್ಕಿಲ್ಲೆಂದು ಅವರು ಪೂರಾ ಮನಗಂಡರು. ಅವರು ವಿಚಾರದಲ್ಲಿ ಬಿದ್ದರು; ಆದರೆ ಸದಾಶಿವನಿಗೆ ಪುರುಸೊತ್ತಿಗೆ ಇದ್ದಿಲ್ಲವಾದ್ದರಿಂದ ಅವನು ಡಾಕ್ಟರಸಾಹೇಬ ಬೇಗನೇ ನಡೆಯಿರಿ, ಎಂದು ಗಡಿಬಿಡಿಯನ್ನು ನಡಿಸಿದನು. ಆಗ ಅವರು ದವಾಖಾನೆಯಲ್ಲಿ ಯಾರೂ ಇಲ್ಲದ್ದರಿಂದ ನಾನು ಬಿಟ್ಟು ಬರಲಾರೆನು! ಎಂದು ಅಂದರು ಆದಕ್ಕೆ ಸದಾಶಿವನು, "ಡಾಕ್ಟರಸಾಹೇಬ ತಾವು ಬರುವ ವರೆಗೆನಾನು ದವಾಖಾನೆಯಲ್ಲಿ ಕೂಡ್ರುತ್ತೇನೆ ನೀವು ಗಾಡಿಯನ್ನು ಮಾಡಿಕೊಂಡು ಬೇಗನೆ ನನ್ನ ಮನೆಗೆ ಹೋಗಿರಿ. ಒಲ್ಲೆವೆನ್ನಬೇಡಿರಿ; ನಿಮ್ಮ ಫೀ ಕೊಡುತ್ತೇನೆ" ಎಂದು ಅಂದನು.

ಕಡೆಗೆ ನಿರುಪಾಯನಾಗಿ ಡಾ. ಸಾಹೇಬರು ಇದ್ದ ಸಂಗತಿಯನ್ನು ಬಾಯಿಬಿಚ್ಚಿ ಹೇಳಲೇಬೇಕಾಯಿತು. ಅವರು “ಈ ಕೇಸು ಕಠಿಣವಾದದ್ದೂ ಮತ್ತು ಗಂಡಾಂತರದ್ದೂ ಅದೆ ನಾನು ಇನ್ನೂವರೆಗೆ ಇಂಥ ರೋಗಿಯ ಔಷಧೋಪಚಾರ ಮಾಡಿಲ್ಲ; ಆದ್ದರಿಂದ ನೀನು ಹೆಚ್ಚೇ ಜಾಣನೂ, ಅನುಭವಿಕನೂ ಆದ ಡಾಕ್ಟರನನ್ನು ಕರೆದುಕೊಂಡು ಹೋಗು. ಇಲ್ಲದಿದ್ದರೆ ಒಬ್ಬ ‘ಮಿಡ್‌ವಾಯಿಫ್’ ಸಿಕ್ಕರೆ ನೋಡು. ಬೇಕಾದರೆ ನಾನು ಸದ್ಯಕ್ಕೆ ನಿನಗೆ ಒಂದು ಔಷಧವನ್ನು ಕೊಡುವೆನು. ಅದರಿಂದ ನಿನ್ನ ಅಕ್ಕನಿಗೆ ಸ್ವಲ್ಪ ಆರಾಮ ಅನಿಸೀತು.” ಹೀಗೆಂದು ಡಾಕ್ಟರರು ಎದ್ದು ಒಳಗೆ ಹೋಗಿ ಔಷಧವನ್ನು ತಯಾರಿಸಹತ್ತಿದರು. ಅವರು ಇನ್ನೂವರೆಗೆ ಕಂಪಾವುಂಡರನನ್ನು ಇಟ್ಟುಕೊಂಡಿದ್ದಿಲ್ಲ. ಯಾಕಂದರೆ ಅವರ ಪ್ರಾಪ್ತಿಯು ಅಷ್ಟಕ್ಕಷ್ಟೇ ಇತ್ತು. ಹಾಗೂ ಹೀಗೂ ಮಾಡಿ ದವಾಖಾನೆಯ ಬಾಡಿಗೆಯನ್ನಷ್ಟು ಮುಟ್ಟಿಸುತ್ತಿದ್ದರು. ಇದನ್ನು ನೋಡಿ ಸದಾಶಿವನಿಗೆ ಪೂರ್ಣ ನಿರಾಶೆಯುಂಟಾಯಿತು. ಅವನಿಗೆ ಮುಂದೇನು ಮಾಡಬೇಕೆಂಬದೇ ತಿಳಿಯದಂತಾಯಿತು. ಮನೆಯಲ್ಲಿ ನನ್ನ ಮತ್ತು ಡಾಕ್ಟರರ ಹಾದಿಯನ್ನು ಆತುರತೆಯಿಂದ ನೋಡುತ್ತ ಕುಳಿತಿರುವರು. ನಾನು ಡಾಕ್ಟರರಿಲ್ಲದೆ ಹೋಗಬೇಕಾಯಿತು, ಎಂದು ವಿಚಾರ ಮಾಡುತ್ತ ನಿಂತಿರಲು, ಡಾಕ್ಟರಸಾಹೇಬರು ಸ್ವತಃ ತಯಾರು ಮಾಡಿದ ಔಷಧದ ಶೀಸೆಯನ್ನು ಅವನ ಮುಂದೆ ತಂದಿಟ್ಟರು; ಮತ್ತು ಅವನಿಗೆ ‘ಹೋಗು ಈ ಔಷಧವನ್ನು ಹೋದ ಕೂಡಲೆ ಅವಳಿಗೆ ಕೊಟ್ಟರೆ ಕೆಲವು ವೇಳೆ ಸಮಾಧಾನವೆನಿಸೀತು. ಅಷ್ಟರಲ್ಲಿಯೇ ನೀನು ಬೇರೊಬ್ಬ ಡಾಕ್ಟರರನ್ನು ಇಲ್ಲವೆ ಮಿಡ‌್‌ವಾಯಿಫಳನ್ನು ಕರಕೊಂಡು ಹೋಗು’ ಎಂದು ಅಂದರು.

ಸದಾಶಿವನು ಔಷಧದ ರೊಕ್ಕವನ್ನು ಕೊಡಹೋದನು;

ಆದರೆ ಡಾಕ್ಟರರು ಇಸಕೊಳ್ಳಲಿಲ್ಲ ಅದರಲ್ಲಿಯೇ ಸಮಾಧಾನ ಹಚ್ಚಿಕೊಂಡು ಸದಾಶಿವನು ಮನೆಗೆ ಹೊರಟನು. ಅವನು ಮನೆಗೆ ಹೋಗಿ ನೋಡುತ್ತಾನೆ, ಇನ್ನೂ ಕೃಷ್ಣೆಯ ಯಾತನೆಗಳು ಕಡಿಮೆಯಾಗಿದ್ದಿಲ್ಲ; ಆದರೆ ಅವು ಹೆಚ್ಚುತ್ತಲೇ ಇದ್ದವು. ಅಲ್ಲಿ ಕುಳಿತ ಎಲ್ಲರ ಕಣ್ಣುಗಳು ಡಾಕ್ಟರರು ಬರುವದರ ಕಡೆಗೇ ಇದ್ದವು. ಇನ್ನು ಡಾಕ್ಟರರು ಬಂದೊಡನೆ ತನ್ನ ದುಃಖವನ್ನು ಬಿಡಿಸುವನೆಂದು ನೆರೆ ನಂಬಿ ತನಗಾಗುವ ಅಸಹ್ಯ ವೇದನೆಗಳನ್ನು ಅತಿ ಕಷ್ಟದಿಂದ ನುಂಗಿಕೊಂಡು ಕೃಷ್ಣೆಯು ನೀರಬಿಟ್ಟ ಮೀನದಂತೆ ಹೊದ್ದಾಡುತ್ತ ಬಿದ್ದಿದ್ದಳು. ಕಡೆಗೆ ಸದಾಶಿವನೊಬ್ಬನೇ ಬಂದದ್ದನ್ನು ನೋಡಿ ಎಲ್ಲರೂ ತೀರ ನಿರಾಶರಾದರು ಸದಾಶಿವನು ಡಾಕ್ಟರರು ಬಾರದೆ ಇದ್ದ ಕಾರಣವನ್ನು ತಿಳಿಸಿ, ತಾನು ತಂದ ಔಷಧವನ್ನು ದುರ್ಗಾಬಾಯಿಯ ಕೈಯಲ್ಲಿ ಕೊಟ್ಟನು ಅದನ್ನು ತಕ್ಕೊಂಡು ದುರ್ಗಾಬಾಯಿಯು 'ಇದು ನಿದ್ರೆಹತ್ತಿ ಗುಂಗು ಬರುವ ಔಷಧವಿದ್ದೀತು!' ಎಂದು ಅಂದಳು ಅಷ್ಟರಲ್ಲಿ ಅಲ್ಲಿಯೇ ತಳಮಳಿಸುತ್ತ ಬಿದ್ದಿರುವ ಕೃಷ್ಣೆಯು "ದುರ್ಗಾಬಾಯಿ, ಆ ಔಷಧವನ್ನು ನನಗೆ ಕೊಟ್ಟು ಬಿಡಿರಿ! ಬೇಕಾದಂಥ ಓಷಧವಿದ್ದರೂ ನಾನು ಕುಡಿಯುತ್ತೇನೆ; ಆದರೆ ನಾನು ಈ ದುಃಖವನ್ನು ಮಾತ್ರ ತಡೆಯಲಾರೆನು!" ಎಂದು ಆರ್ತಸ್ವರದಿಂದ ನುಡಿದಳು.

ತನ್ನ ಅಕ್ಕನ ಈ ದೀನವಾಣಿಯನ್ನು ಕೇಳಿ ಸದಾಶಿವನ ಹೊಟ್ಟೆಯಲ್ಲಿ ತಣ್ಣೀರು ಹೊಯ್ದಂತಾಯಿತು. ತಾನು ಏನು ಮಾಡಿದರೆ ತಮ್ಮ ಅಕ್ಕನು ಸಂಕಟದಿಂದ ಪಾರಾದಾಳು? ಎಂಬದರ ಬಗ್ಗೆ ವಿಚಾರ ಮಾಡುತ್ತ ಸದಾಶಿವನು ಪಡಸಾಲೆಯಲ್ಲಿ ಕಂಬಕ್ಕೆ ಆತು ನಿಂತುಕೊಂಡನು. ಇನ್ನೂವರೆಗೆ ಅವನಿಗೆ ಮೈಮೇಲಿನ ಅಂಗಿಯನ್ನು ತೆಗೆದಿಡಲು ಸಹ ಅವಕಾಶ ದೊರೆತಿದ್ದಿಲ್ಲ. ಬೋಟನ

ಪ್ರವಾಸದಿಂದ ಅವನ ಸ್ವಚ್ಛವಾದ ಬಿಳೀ ಕೋಟು ಹೊಲಸಾಗಿ ಹೋಗಿತ್ತು. ಉಟ್ಟ ದೋತರವಾದರೂ ಕಪ್ಪಾಗಿದ್ದು, ಬೋಟನಿಂದ ಸಾಮಾನುಗಳನ್ನು ಇಳಿಸಿಕೊಳ್ಳುವ ಗದ್ದಲದಲ್ಲಿ ಎರಡು ಮೂರು ಕಡೆಗೆ ಹರಿದುಹೋಗಿತ್ತು. ಇರಲಿ. ಅವನು ಹೀಗೆ ವಿಚಾರ ಮಾಡುತ್ತ ನಿಂತಿರಲು, ನೆರೆಮನೆಯ ವಾಮನರಾಯರು ಅವನ ಸಮೀಪಕ್ಕೆ ಬಂದು, 'ಸದಾಶಿವಾ, ಡಾಕ್ಟರರು ಬಂದರೇನು'? ಎಂದು ಕೇಳಿದರು ಆಗ್ಗೆ ಸದಾಶಿವನು ಅವರಿಗೂ ಡಾಕ್ಟರರ ವಿಷಯವಾಗಿ ಎಲ್ಲ ಸಂಗತಿಯನ್ನು ತಿಳಿಸಿದನು. ಇದನ್ನು ಕೇಳಿ ವಾಮನರಾಯರ ಮನಸ್ಸಿಗೆ ಕೆಡಕೆನಿಸಿತು ಅವರು ದಾದರದೊಳಗಿನ ಒಂದು ಗಿರಣಿಯಲ್ಲಿ ಯಂತ್ರದ ಸಾಮಾನುಗಳನ್ನು ಜೋಡಿಸುವ (Fitter) ಕೆಲಸವನ್ನು ಮಾಡುತ್ತಿದ್ದರು. ಅವರು ಇವತ್ತಿನ ದಿವಸ ಸ್ವಂತದ ಕೆಲಸದ ಸಲುವಾಗಿ ಮಧ್ಯಾಹ್ನದ ಒಪ್ಪತ್ತಿನ ರಜೆಯನ್ನು ತೆಗೆದುಕೊಂಡು ಬಂದಿದ್ದರು. ಮನೆಗೆ ಬಂದ ಕೂಡಲೆ ಅವರ ಪತ್ನಿಯು ಅವರಿಗೆ ಕೃಷ್ಣೆಯ ಸ್ಥಿತಿಯನ್ನು ತಿಳಿಸಿದಳು; ಆದರೆ ಅವರಾದರೂ ಏನು ಮಾಡುವರು? ಅವರು ಭಾಗೀರಥೀದೇವಿಯ ಬಳಿಗೆ ಹೋಗಿ "ಸದಾಶಿವನು ಇದೇ ಈಗ ಡಾಕ್ಟರನನ್ನು ಕರಕೊಂಡು ಬರುವನು ನೀವು ಏನೂ ಚಿಂತೆ ಮಾಡಬೇಡಿರಿ." ಎಂದು ನಾಲ್ಕು ಧೈರ್ಯದ ಮಾತುಗಳನ್ನು ಹೇಳಿದ್ದರು. ಸದಾಶಿವನು ಡಾಕ್ಟರರಿಲ್ಲದೆ ಬರಲು ವಾಮನರಾಯರು ಕ್ಷಣಹೊತ್ತಿನವರೆಗೆ ವಿಚಾರ ಮಾಡಿ, 'ಸದಾಶಿವಾ, ನೀನು ಹೀಗೆ ಸುಮ್ಮನೆ ನಿಂತರೆ ಏನಾಗುವದು? ಇನ್ನೊಮ್ಮೆ ಹೋಗಿ ಯಾವನಾದರೊಬ್ಬ ಉತ್ತಮ ಡಾಕ್ಟರನನ್ನು ಕರಕೊಂಡು ಬಾ. ಅವನೊಬ್ಬನು ಬರದಿದ್ದರೇನಾಯಿತು? ಮತ್ತು ಅವನು ಬರದೆ ಇದ್ದದ್ದೂ ಒಂದು ರೀತಿಯಿಂದ ನೆಟ್ಟಗೇ ಆಯಿತು! ತಮಗೆ ಗೊತ್ತಿಲ್ಲದ ವಿಷಯದಲ್ಲಿ ಗೊಂದಲ

ಹಾಕುವವದಕ್ಕಿಂತ, ತಮ್ಮ ಅಜ್ಞಾನವನ್ನು ಒಪ್ಪಿಕೊಳ್ಳುವದು ಲೇಸು! ನಾನು ಆ ಡಾಕ್ಟರನನ್ನು ಎಳ್ಳಷ್ಟಾದರೂ ದೂಷಿಸಲಾರೆನು. ಒಳ್ಳೇದು, ಆದಿರಲಿ ನೀನು ಈಗ ಹೋಗು; ಮತ್ತು ಒಬ್ಬ ಜಾಣ ಡಾಕ್ಟರನನ್ನು ಕರೆದುಕೊಂಡು ಬಾ. ನನ್ನ ಮತವನ್ನು ಕೇಳಿದರೆ, ನೀನು ಅಂಥಿಂಥ ಡಾಕ್ಟರರನ್ನು ತರುವದಕ್ಕಿಂತ ಮುಂಬಯಿಗೆ ಹೋಗಿ ಡಾಕ್ಟರ 'ರಾಜೇ' ಇವರನ್ನೇ ಕರೆದುಕೊಂಡು ಬಾ ಈಗಿನ ದಿವಸಗಳಲ್ಲಿ ಎಂದರೆ ಅವನೊಬ್ಬನೇ ಹೆಸರಾದ ಡಾಕ್ಟರನಿರುವನು. ಇನ್ನು ಹೋಗು, ತಡಮಾಡಬೇಡ ಅವನು ಬಂದನೆಂದರೆ ನಿಜ ವಾಗಿ ಐದೇ ಮಿನೀಟುಗಳಲ್ಲಿ ನಿಮ್ಮ ಅಕ್ಕನನ್ನು ಈ ದೊಡ್ಡ ಕುತ್ತಿ ನೊಳಗಿಂದ ಪಾರು ಮಾಡುವನು ಹೂ, ಹೋಗು ಬೇಗ-ಹೋಗು, ಈಗ ಮೂರುವರೆ ಗಂಟೆಯಾಗಿರುತ್ತದೆ ಇನ್ನು ೩ ಹೊಡೆದು ೪೦ ಮಿನಿಟಗೇ ಒಂದು ಗಾಡಿ ಬರುವದು. ನೀನು ಈಗ ಹೋ ದರೆ ಮುಕ್ಕಾಲು ತಾಸಿನಲ್ಲಿ ತಿರುಗಿ ಬರುವಿ.

'ಡಾಕ್ಟರ ರಾಜೆ' ಇವರ ಹೆಸರು ಕಿವಿಗೆ ಬಿದ್ದ ಕೂಡಲೆ ಸದಾಶಿವನಿಗೆ ಮತ್ತೆ ಧೈರ್ಯ ಬಂತು ಅವನು ಕೂಡಲೆ ವಾಮನ ರಾಯರ ಕಡೆಯಿಂದ, ಆ ಡಾಕ್ಟರರ ಸರಿಯಾದ ವಿಳಾಸವನ್ನು ಕೇಳಿ ಕೊಂಡು ತನ್ನ ದಿನವಹಿ (ಡಾಯರಿ)ಯಲ್ಲಿ ಟಿಪ್ಪಣಿ ಮಾಡಿಕೊಂ ಡನು. ಆ ಮೇಲೆ ಮನೆಯೊಳಗೆ ಹೋಗಿ 'ನಾನು ಮುಂಬಯಿಯ ನಾಮಾಂಕಿತ ಡಾಕ್ಟರರನ್ನು ಕರೆತರುತ್ತೇನೆ' ಎಂದು ಹೇಳಿದವನೇ ಸ್ಟೇಶನ್ನದ ದಾರೀ ಹಿಡಿದು ಹಕ್ಕಿಯಂತೆ ಹಾರಿದನು.



## ೬ನೆಯ ಪ್ರಕರಣ.

# ಇದಕ್ಕೆ ಭೂತದಯೆಯೆನ್ನಬೇಕೇ?

ವಿಲಾಯತಿಯಲ್ಲಿ, ಇಲ್ಲವೆ ಅತುಲವಾದ ಸಂಪತ್ತಿಯಿಂದ ಮೆರೆಯುವ ಬೇರೆ ಯಾವದಾದರೊಂದು ಪಾಶ್ಚಿಮಾತ್ಯರಾಷ್ಟ್ರದಲ್ಲಿ ಯಾವನಾದರೊಬ್ಬನು ವಿದ್ಯೆ, ಯಶಸ್ಸು, ಕೀರ್ತಿಗಳನ್ನು ಹೊಂದಿ ಸ್ವದೇಶಕ್ಕೆ ಮರಳಿ ಬಂದನೆಂದರೆ ನಾವು ಒಳ್ಳೇ ಅಭಿಮಾನದಿಂದ ಅವನ ಆದರ ಸತ್ಕಾರ ಮಾಡುವೆವು; ಮತ್ತು ಅವನು ಸಂಪಾದಿಸಿದ ಜ್ಞಾನದಿಂದ ತಮ್ಮ ದೇಶಬಾಂಧವರ ಏಳ್ಗೆಗಾಗಿ ಈ ಪಾಶ್ಚಾತ್ಯ ದೇಶದಿಂದ ಬಂದ ನಮ್ಮ ಶಿಷ್ಯರು ಹೆಣಗುವರೆಂದು ನಾವು ಅಂತಃ ಕರಣ ಪೂರ್ವಕವಾಗಿ ಇಚ್ಛಿಸುತ್ತೇವೆ ನಾವು ಹೀಗೆ ಬಯಸುವದಂತೂ ನಮ್ಮ ಕರ್ತವ್ಯವು; ಅವರು ಮಾತೃಭೂಮಿಯ ಮೇಲೆ ಕಾಲಿಕ್ಕುವದಕ್ಕಿಂತ ಮೊದಲು ಬಂದರದಲ್ಲಿಯೇ ಒಳ್ಳೇ ಅಭಿಮಾನ ಪೂರ್ವಕವಾಗಿ ಅವರ ಆದರ ಸತ್ಕಾರ ಮಾಡುವದಾದರೂ ಉಚಿತವೇ ಇರುತ್ತದೆ; ಆದರೆ ಪಾಶ್ಚಾತ್ಯದೇಶಗಳಿಂದ ಸುಶಿಕ್ಷಿತರಾಗಿ ಬಂದ ಜನರು ತಮ್ಮ ದೇಶಬಾಂಧವರ ಉನ್ನತಿಗೆ ಕಾರಣರಾಗುವರೋ, ಇಲ್ಲವೆ ಅವರ ಅವನತಿಗೆ ಕಾರಣರಾಗುವರೋ ಎಂಬದೊಂದೇ ಪ್ರಶ್ನೆ ಉಳಿಯುತ್ತದೆ! ಯಾಕಂದರೆ ಇಂಥ ಜನರು ವಿಲಾಯತಿಯಿಂದ ತಮ್ಮ ಜ್ಞಾನದ ಕೂಡ ತಂದ ಅವಗುಣಗಳೇ ನಮಗೆ ಮುಳುವಾಗುವವು.

ಡಾ. ರಾಜೇಯವರು ಮುಂಬಯಿಯಲ್ಲಿ ಹೆಸರು ಪಡೆದ ಒಬ್ಬ ಪ್ರಖ್ಯಾತ ಡಾಕ್ಟರರಾಗಿದ್ದರು. ಅವರು ವೈದ್ಯಕೀ ವಿಷಯ

ದಲ್ಲಿ ಪ್ರಾವೀಣ್ಯವನ್ನು ಪಡೆದು ಅವರಲ್ಲಿ ಮೇಲ್ತರದ ಯಶಸ್ಸನ್ನೂ, ಕೀರ್ತಿಯನ್ನೂ ಸಂಪಾದಿಸಿದ್ದರು. ಇವರು ವಿಲಾಯತಿಯಲ್ಲಿ ಎಮ್. ಡೀ. ಪರೀಕ್ಷೆಯಲ್ಲಿ ತೀರ್ಗಡೆ ಹೊಂದಿ ಬಂದವರಾಗಿದ್ದರು. ಈ ಜಾಣರಾದ ಮತ್ತು ಹೆಸರಾದ ಡಾಕ್ಟರಸಾಹೇಬರ ಅಡ್ಡಹೆಸರು ಮಾತ್ರ 'ರಾಜೆ' ಎಂದು ಇತ್ತು; ಆದರೆ ಅವರ ಮೊದಲಿನ ಸ್ಥಿತಿಯು ತೀರ ಬಡತನದ್ದಾಗಿತ್ತು. ಇವರು ಮೆಡಿಕಲ್ ಕಾಲೇಜದಲ್ಲಿ ದ್ದಾಗ್ಗೆ ಅವರ ಚುರುಕು ಬುದ್ಧಿಯನ್ನು ನೋಡಿ ಒಬ್ಬ ಧನಾಢ್ಯ ನಾದ ಕೊಡಗ್ಯೆ ಧೊರೆಯು,ಕೇವಲ ಪರೋಪಕಾರ ಬುದ್ಧಿಯಿಂದ ಅವರಿಗೆ ವಿಲಾಯತಿಗೆ ಹೋಗಿ ವಿದ್ಯೆಕಲಿಯಲಿಕ್ಕೆ ಪೂರ್ಣಸಹಾಯ ಮಾಡಿದನು. ಡಾಕ್ಟರಸಾಹೇಬರು ವಿದ್ಯೆ ಕಲಿತು ಮುಂಬೈಗೆ ತಿರುಗಿ ಬಂದ ಮೇಲೆ, ಮುಂಬಯಿ ಪಟ್ಟಣಿಗರು ಅವರಿಗೆ ಯೋಗ್ಯ ವಾದ ಸನ್ಮಾನ ಮಾಡಿದರು; ಮತ್ತು ಡಾಕ್ಟರ ಸಾಹೇಬರಾದರೂ ಶ್ರೀಮಂತರಿಗೂ, ಬಡವರಿಗೂ ಸಮನಾಗಿಯೇ ತಮ್ಮ ಅಪೂರ್ವ ಜ್ಞಾನದ ಲಾಭವನ್ನು ಕೊಟ್ಟು, ಸ್ವದೇಶದ ಉನ್ನತಿಗಾಗಿ ತಮ್ಮ ಕೈಲಾದಷ್ಟು ಸಹಾಯ ಮಾಡುವೆನೆಂದು ( ! ) ವಚನ ಕೊಟ್ಟರು. ಡಾಕ್ಟರಸಾಹೇಬರ ಈ ನಿಶ್ಚಯಾತ್ಮಕವಾದ ವಚನಗಳನ್ನು ಕೇಳಿ ಈ ಡಾ. ಸಾಹೇಬರ ಸಹಾಯದಿಂದ ನಮ್ಮ ದೇಶದ ಏಳ್ಗೆಯು ತಪ್ಪದೆ ಆಗುವದೆಂದು ನಾವು ಪೂರಾ ನಂಬಿದ್ದೆವು! ಆದರೆ ನಾವು ಇಚ್ಛಿಸಿದಂತೆಯೇ ಅವರು ನಡೆಯುವಷ್ಟು ಸುಬುದ್ಧಿಯು ಅವರು ಕಲಿತು ಬಂದ ವಿಲಾಯತೀ ಶಿಕ್ಷಣದಲ್ಲಿ ಇರಬೇಕಲ್ಲವೇ? ಆದರೆ ತಾವು ವಿಲಾಯತಿ ಎಮ್. ಡೀ. ಪರೀಕ್ಷೆಯಲ್ಲಿ ಪಾಸಾದವರಿರುವೆ ವೆಂಬ ಮಬ್ಬಿನಲ್ಲಿ ತಮ್ಮ ಪೂರ್ವದ ದರಿದ್ರಾವಸ್ಥೆಯನ್ನು ಅವರು ಪೂರಾ ಮರೆತೇ ಬಿಟ್ಟರು! ಸ್ವಲ್ಪ ದಿವಸಗಳಲ್ಲಿ ಡಾಕ್ಟರಸಾಹೇಬ ರಿಗೆ ಒಂದು ಮಿನುಗುವ ಪವನವನ್ನು ಕೊಟ್ಟು ಹೊರತು ಅವರು

ರೋಗಿಗಳನ್ನು ನೋಡಲಿಕ್ಕೆ ಖುರ್ಚಿಯಿಂದ ಏಳದಾದರು; ಅದರೆ ಇಷ್ಟೇ ಅಲ್ಲ ಮುಂಬೈಯಲ್ಲಿ ಬಡಬಗ್ಗರ ಮೇಲೆ ಮಮತೆಯಿದ್ದ ಮತ್ತೊಬ್ಬ ಡಾಕ್ಟರರು ಎಲ್. ಡಿ. ಯಾಗಿ ಬಂದು, ಬಡವರಿಗೆ ಫೀ ಸಹ ತೆಗೆದುಕೊಳ್ಳದೆ ಔಷಧವನ್ನು ಕೊಡುವರೆಂಬ ಸುದ್ದಿಯು ಇವರಿಗೆ ತಿಳಿದ ಕೂಡಲೆ ನಮ್ಮ ಡಾ. ರಾಜೇ ಸಾಹೇಬರು ಅವರಿಗೆ ಒಂದು ಖಾಸಗಿ ಪತ್ರವನ್ನು ಬರೆದು ನೀವು ಹೀಗೆ ಕಡಿಮೆ ಫೀ ತಕೊಂಡು ವ್ಹಿಜೀಟಿಗೆ ಹೋಗುವದರಿಂದ ನಿಮ್ಮ ಯೋಗ್ಯತೆಯು ಕಡಿಮೆಯಾಗುತ್ತ ಹೋಗುವದು, ಎಂದು ಸ್ಪಷ್ಟವಾಗಿ ಬರೆದು ತಿಳಿಸುವರು ಇದೊಂದು 'ಅವ್ಯಾಪಾರೇಷುವ್ಯಾಪಾರವಲ್ಲವೇ?' ಮತ್ತು ನೀಚ ಬುದ್ಧಿಯು ಕಳಸಕ್ಕೆ ಮುಟ್ಟಿದಂತಾಗಲಿಲ್ಲವೇ! ಇರಲಿ ಸಂಜೆಸು ನಾಲ್ಕು ಹೊಡೆಯುವ ವೇಳೆಯಾಗಿತ್ತು ಡಾ ರಾಜೇಯುವರು ತಮ್ಮ ಭವ್ಯವಾದ ದವಾಖಾನೆಯಲ್ಲಿ ಕುಳಿತಿದ್ದರು ಅವರ ಎದುರಿಗ ಕೆಲವು ಖುರ್ಚಿಗಳನ್ನು ಸಾಲಾಗಿ ಇಟ್ಟಿದ್ದು, ಅವುಗಳ ಮೇಲೆ ಏಳು-ಎಂಟು ಜನ ರೋಗಿಗಳು ಕುಳಿತಿದ್ದರು. ಅವರಲ್ಲಿ ಇಬ್ಬರು ಭಾಟಿಯಾ ಕುಲದವರೂ, ಒಬ್ಬ ಫಾರ್ಸಿ ತರುಣ ಸ್ತ್ರೀಯೂ ಮತ್ತು ಒಬ್ಬ ಆಂಗ್ಲ ಯುವತಿಯೂ ಇದ್ದರು. ಆಗ್ಗ ಡಾ ಸಾಹೇಬರು ಗೌರವರ್ಣದ ಆಂಗ್ಲ ಯುವತಿಯ ಬಳಿಯಲ್ಲಿ ಕುಳಿತು ಅವಳ ರೋಗಚಿಕಿತ್ಸೆಯನ್ನು ಮಾಡುತ್ತಿದ್ದರು. ಇಷ್ಟರೊಳಗೇ ಸದಾಶಿವನು ಒಳಗೆ ಬಂದನು. ಆ ಸ್ಥಳದಲ್ಲಿ ಬೇರೆ ಜನರು ಕುಳಿತಿರುವರೆಂಬ ಎಚ್ಚರವೇ ಅವನಿಗಿದ್ದಂತೆ ತೋರಲಿಲ್ಲ

ಕೂಡಲೆ ಸದಾಶಿವನು ಡಾಕ್ಟರರ ಮೇಜಿನ ವರೆಗೆ ಹೋಗಿ ನಿಂತು:—"ಡಾಕ್ಟರಸಾಹೇಬರೇ, ನಾನು ತಮ್ಮನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರುವೆನು. ಬಹಳ ಮಹತ್ವದ ಕೇಸು

ಇರುವದು. ನಾನು ತಮ್ಮ ಫೀ ಕೊಡುತ್ತೇನೆ ತೀವ್ರವೇ ಬರ ಬೇಕು'' ಎಂದನು

''ಹಿಳ್ಳೇದು, ಕುಳಿತುಕೊಳ್ಳಿರಿ.''

ಇಷ್ಟೇ ಉತ್ತರ ಕೊಟ್ಟು ಡಾ ಸಾಹೇಬರು ಸದಾಶಿವನ ಕಡೆಗೆ ಮಿಕಿ-ಮಿಕಿ ನೋಡುತ್ತ ಕುಳಿತರು ಅವನು ಹಿಮ್ಮಿಂದೊಮ್ಮೆ ಮೇಜಿನ ಮೇಲೆ ಬಂದು ಬಿದ್ದದ್ದನ್ನು ನೋಡಿ ಅವರಿಗೆ ಆಶ್ಚರ್ಯ ವೆನಿಸಿತು. ಸದಾಶಿವನ ಉಡಿಗೆ ತೊಡಿಗೆಗಳು ಬಲು ಹೊಲಸಾ ದ್ದರಿಂದ, ಇವನು ಯಾವನೊಬ್ಬ ಗಿರಣಿಯ ಕೂಲಿಕಾರನಿರಬಹು ದೆಂದು ಅವರಿಗೆ ಅನಿಸಿತು ಮತ್ತೆ ಅವನು ಮೇಜಿನ ಬಳಿಯಲ್ಲಿ ಸುಮ್ಮನೆ ನಿಂತದ್ದನ್ನು ನೋಡಿ ಡಾಕ್ಟರನು ಅವನಿಗೆ ''ಸ್ವಲ್ಪ ತಡೆಯಿರಿ ಈ ರೋಗಿಗಳನ್ನು ಪರೀಕ್ಷಿಸುವದಾದ ಮೇಲೆ ನಿಮ್ಮ ವಿಚಾರ ಮಾಡುವೆನು.'' ಹೀಗೆಂದು ಹೇಳಿ ತಮ್ಮ ಹತ್ತರ ಕುಳಿತ ಆಂಗ್ಲಯುವತಿಯ ಕಡೆಗೆ ಮತ್ತೆ ಹೊರಳಿದರು. ಡಾಕ್ಟರ ಸಾಹೇಬರು ತನ್ನ ಕಡೆಗೆ ತಿರುಗಿ ನೋಡುವದಿಲ್ಲೆಂದುತಿಳಿದು, ಸದಾಶಿವನು ಅಲ್ಲಿಯೇ ಹತ್ತಿರದಲ್ಲಿದ್ದ ತೆರವಾದ ಖುರ್ಚಿಯ ಮೇಲೆ ಕುಳಿತನು. ಅವನು ಕುಳಿತ ಮೇಲೆ ಡಾಕ್ಟರರು ಮತ್ತೊಮ್ಮೆ ಅವನ ಕಡೆಗೆ ನೋಡಿದರು. ಈ ಹೊಲಸು ಉಡುಪು ಗಳನ್ನು ಧರಿಸಿದ ಕೂಲಿಯುವನು ತಮ್ಮ ಬೇರೆ ಧನಿಕರಾದ ರೋಗಿ ಗಳ ಜೊತೆಯಲ್ಲಿ ಖುರ್ಚಿಯ ಮೇಲೆ ಕುಳಿತದ್ದನ್ನು ನೋಡಿ ಅವರು ತಮ್ಮ ಹುಬ್ಬುಗಳನ್ನು ಗಂಟಿಕ್ಕಿದರು; ಆದರೆ ತಮ್ಮ ಅಂಬೋಣವನ್ನು ಬಾಯಿಬಿಚ್ಚಿ ಹೇಳುವ ಸಮಯವಿದಲ್ಲವೆಂದು ತಿಳಿದು ಅವರು ಸುಮ್ಮನೆ ಕುಳಿತಿದ್ದರು. ಅವರು ಸ್ವಲ್ಪ ಹೊತ್ತಿನ ಮೇಲೆ ಆ ಆಂಗ್ಲಯುವತಿಗೆ 'ಪ್ರಿಸ್‌ಕ್ರಿಪ್ಶನ್' ಬರೆದು ಕೊಟ್ಟ ಮೇಲೆ ಅವಳು ಎದ್ದಳು ಅದಾದ ಮೇಲೆ ನಂಬರಿನ ಪ್ರಕಾರ

ಮತ್ತೊಬ್ಬ ಭಾಟಿಯಾರೋಗಿಯು ಡಾಕ್ಟರ ಬಳಿಯಲ್ಲಿದ್ದ ಖುರ್ಚಿಯ ಮೇಲೆ ಹೋಗಿ ಕುಳಿತನು ಇದನ್ನು ಕಂಡು ಸದಾಶಿವನ್ನು ಎದ್ದು ಮುಂದಕ್ಕೆ ಹೋಗಿ, "ಡಾಕ್ಟರಸಾಹೇಬರೇ, ನಾನು ಅತಿ ಅವಸರದಲ್ಲಿರುವೆನು. ರೋಗಿಯು ಬಹಳ ಗಂಡಾಂತರದಲ್ಲಿ........"

ಇಷ್ಟು ಅನ್ನುವದರೊಳಗೇ, "ಹೂ, ತಿಳಿಯಿತು, ನೀವು ಕುಳಿತುಕೊಳ್ಳಿರಿ. ನಿಮ್ಮ ಪಾಳಿಯು ಬಂದ ಕೂಡಲೆ ನಿಮ್ಮ ಮಾತನ್ನು ಕೇಳಿಕೊಳ್ಳುವೆನು" ಹೀಗೆಂದು ಡಾಕ್ಟರರು ಆ ಭಾಟಿಯಾನ ಪ್ರಕೃತಿಯನ್ನು ಪರೀಕ್ಷಿಸ ಹತ್ತಿದರು ಈ ಮೇರೆಗೆ ಮತ್ತೆ ಹತ್ತು ಮಿನೀಟುಗಳೆಂದರೆ ಸದಾಶಿವನಿಗೆ ಹತ್ತು ಯುಗಗಳಂತೆ ತೋರಿದವು. ಸ್ವಲ್ಪ ಹೊತ್ತಿನ ಮೇಲೆ ಆ ರೋಗಿಗೆ 'ಪ್ರಿಸ್‌ಕಿಪ್ಶನ್' ಬರೆದು ಕೊಟ್ಟ ಮೇಲೆ, ಅವನ ಕೆಳಗೆ ಕುಳಿತ ಫಾರ್ಶಿಗೃಹಸ್ಥನು ಎದ್ದು ನಿಂತನು. ಈಗಾದರೂ ಡಾಕ್ಟರರು ತನ್ನ ಮಾತಿನ ಕಡೆಗೆ ಲಕ್ಷಗೊಟ್ಟಾರೆಂದು ನೆನೆದು ಸದಾಶಿವನು ಮತ್ತೆ ಎದ್ದು ನಿಂತು, "ಡಾಕ್ಟರಸಾಹೇಬರೇ, ಜೀವದ ಮೇಲಿನ ಪ್ರಸಂಗವಿರುವದು. ನಮ್ಮ ಅಕ್ಕನಿಗೆ ಪ್ರಸೂತಿ ಸಮಯದಲ್ಲಿ ಕೂಸು ಅಡ್ಡ ಸಿಕ್ಕದೆ."

"ನನಗೆ ಅದೆಲ್ಲಾ ಗೊತ್ತುಂಟು. ನೀವು ಹೀಗೆ ನನಗೆ ಮೇಲಿಂದ ಮೇಲೆ ತ್ರಾಸ ಕೊಡಹತ್ತಿದರೆ ದವಾಖಾನೆಯಿಂದ ಹೊರಗೆ ಹೋಗಬೇಕಾದೀತು!" ಎಂದು ಡಾಕ್ಟರರು ಕಣ್ಣು ಕೆರಳಿಸಿ ಹೇಳಿದರು.

ಸದಾಶಿವನು ನಿರುಪಾಯನಾಗಿ ಮತ್ತೆ ಖುರ್ಚಿಯ ಮೇಲೆ ಕುಳಿತನು; ಆದರೆ ಅವನ ಮನಸ್ಸಿನ ಸ್ಥಿತಿಯು ಆಗ್ಗೆ ಏನಾಗಿತ್ತೆಂಬದನ್ನು ತಿಳಿಯುವದು ಕಠಿಣವಾಗಿದೆ. ವ್ಯರ್ಥ ಹೋಗುವ ಪ್ರತಿಯೊಂದು ನಿಮಿಷದಲ್ಲಿ ಅಕ್ಕನ ಅವಸ್ಥೆಯು ಏನಾಗುತ್ತಿರಬಹುದೆಂದು ನೆನೆದು ಅವನು ಅತಿ ತಲ್ಲಣಗೊಂಡನು! ಮತ್ತು ದಿಗಿಲುಗೊಂಡು

ಅವನು ಅಲ್ಲಿ ಕೂಡ್ರಲಾರದೆ ಮತ್ತೆ ಎದ್ದು ನಿಂತು, ಅಂಗಲಾಚಿ ಬೇಡಿಕೊಳ್ಳುವವನಂತೆ ಸೆರಗೊಡ್ಡಿ ದೀನಸ್ವರದಿಂದ "ಡಾಕ್ಟರಸಾಹೇಬರೇ, ನಾನು ನಿಮ್ಮ ಕಾಲು ಬೀಳುತ್ತೇನೆ! ನನ್ನ ಸಂಗಡ ನಡೆಯಿರಿ. ನೀವು ಈಗ ಬರದಿದ್ದರೆ ನಮ್ಮ ಅಕ್ಕನು...."

"ನೀನು ಎಂಥ ವಿಲಕ್ಷಣವಾದ ಮನುಷ್ಯನಿರುವಿಯೋ! ಇಪ್ಪತ್ತು ಸಾರೆ ಸಾರಿ ಹೇಳಿದರೂ ನಿನ್ನ ಹಟವನ್ನು ಬಿಡಲೊಲ್ಲಿ; ನಾನು ಇನ್ನು ನಿನ್ನನ್ನು ನಿಜವಾಗಿ ಹೊರಗೆ ಹಾಕಿಸಿ ಬಿಟ್ಟೇನು" ಸದಾಶಿವನು ದೀನನಂತೆ ಸುಮ್ಮನೆ ನಿಂತುಬಿಟ್ಟನು. ಅವನಿಗೆ ಮುಂದೆ ಏನು ಮಾಡಬೇಕೆಂಬದು ತಿಳಿಯದಂತಾಯಿತು ಈ ದೊಡ್ಡ ಡಾಕ್ಟರಸಾಹೇಬರು ಬಂದ ಕೂಡಲೆ ತನ್ನ ಅಕ್ಕನಿಗೆ ಗುಣವಾಗಿ ಅವಳು ಸುರಕ್ಷಿತವಾಗಿ ಪ್ರಸೂತಳಾಗುವಳೆಂದು ಅವನು ತಿಳಿದಿದ್ದನು; ಆದರೆ ಇವೆಲ್ಲ ಅವನ ಆಶೆಗಳು ಹೊಳೆಯಲ್ಲಿ ಹುಣಸೀ ಹಣ್ಣು ತೊಳೆದಂತಾದುವು! ಅವನು ಅಂಥ ಹತಾಶೆಯ ಸ್ಥಿತಿಯಲ್ಲಿ ಮತ್ತೆ ಖುರ್ಚಿಯ ಮೇಲೆ ಕುಳಿತನು; ಮತ್ತು ಹತ್ತು ಹದಿನೈದು ಮಿನೀಟುಗಳಾದವು. ಸದಾಶಿವನ ಮನಸ್ಸಿನಲ್ಲಿ ಅನೇಕ ವಿಚಾರಗಳ ತಾಕಲಾಟವು ನಡೆದಿತ್ತು. ಅವನು ಒಂದೇಸವನೆ ಡಾಕ್ಟರರ ಕಡೆಗೆ ನೋಡುತ್ತಿದ್ದನು. ಇತ್ತ ಆ ಫಾರ್ಸೀ ಗೃಹಸ್ಥನು ತನ್ನ ಸಂಗತಿಯನ್ನು ತಿಳಿಸಿ ತನ್ನ ಆಚೆಗೆ ಕುಳಿತಿದ್ದ ಫಾರ್ಸೀ ಸ್ತ್ರೀಯನ್ನು ತನ್ನ ಕಡೆಗೆ ಕರೆದನು. ಡಾಕ್ಟರಸಾಹೇಬರು ನಗೆ ಮೊಗದವರಾಗಿ ಅವಳ ಕೈಯನ್ನು ಹಿಡಿದು ನಾಡೀ ಪರೀಕ್ಷೆಯನ್ನು ಮಾಡತೊಡಗಿದರು ಈ ವೇಳೆಗೆ ಹೊತ್ತು ನಿಲ್ಲದೆ ಹೋಗತೊಡಗಿತು; ಆದರೆ ಆ ಪ್ರತಿಯೊಂದು ಸೆಕಂದಿನೊಡನೆ ಸದಾಶಿವನ ಎದೆಯು ನಾಡಿಯು ಧಡಧಡಾ ಎಂದು ಹಾರತೊಡಗಿತ್ತು.

ಅವನು ಬರಬರುತ್ತ ಬಹಳ ಕಕ್ಕಾವಿಕ್ಕಿಯಾದನು. ಡಾ.

ಸಾಹೇಬರಂತೂ ಇನ್ನೂ ತನಕ ಬಹು ಪ್ರೇಮದಿಂದ ಆ ತರುಣಿಯನ್ನು ಪರೀಕ್ಷಿಸುವದರಲ್ಲಿಯೇ ತೊಡಗಿದ್ದರು. ಹದಿನೈದು ಮಿನೀಟುಗಳಾದರೂ ಪರೀಕ್ಷೆಯು ಮುಗಿಯಲೊಲ್ಲದು! ಅಷ್ಟು ವೇಳೆಯಲ್ಲಿ ಸದಾಶಿವನು ಎರಡು ಮೂರು ಸಾರೆ ತನ್ನ ಖುರ್ಚಿಯಿಂದೆದ್ದು ಮತ್ತೆ ಕುಳಿತನು; ಆದರೆ ವೇಳೆಯು ಹೆಚ್ಚಾದಂತೆ ಅವನು ಅತ್ತಿತ್ತ ಹೆಚ್ಚಾಗಿ ಹೊಯ್ದಾಡಹತ್ತಿದನು ಇನ್ನು ಮೇಲೆ ಮಾತ್ರ ಅವನಿಗೆ ಬಾಯಿಮುಚ್ಚಿಕೊಂಡಿರುವದಾಗಲಿಲ್ಲ! ಅವನು ಮತ್ತೆ ಎದ್ದು ಮುಂದಕ್ಕೆ ಸರಿದು:“ಡಾಕ್ಟರ ಸಾಹೇಬರೇ, ನೀವು ನನ್ನ ಸಂಗತಿಗೆ ಯಾವಾಗ್ಗೆ ಕಿವಿಗೊಡುವಿರಿ? ನಾನು ಬಂದು ಎಷ್ಟು ಹೊತ್ತಾಯಿತು? ಇಷ್ಟೊತ್ತಿಗೆ ನಮ್ಮ ಅಕ್ಕನು ಸತ್ತು ಸಹ ಹೋಗಿರಬಹುದು....”

ಇದನ್ನು ಕೇಳಿ ಡಾಕ್ಟರರು ಕಣ್ಣು ಕೆಂಪಗೆ ಮಾಡಿ:“ಎಲೋ ನೀನು ಮನುಷ್ಯನಾಗಿರುವಿಯೋ, ದನವಾಗಿರುವಿಯೋ?” ಎಂದು ಗದ್ದರಿಸಿ ಮೇಜಿನ ಮೇಲಿದ್ದ ಗಂಟೆಯನ್ನು ಜೋರಿನಿಂದ ಬಾರಿಸಿದರು. ಅದರ ನಾದವೊಡನೆ ಒಬ್ಬ ಶಿಪಾಯಿಯು ಒಳಗೆ ಬಂದನು ಅವನನ್ನು ನೋಡಿ ಸದಾಶಿವನ ಕಡೆಗೆ ಬೊಟ್ಟು ಮಾಡಿ ಡಾ. ಸಾಹೇಬರು:“ಶಿಪಾಯ್, ಈ ಲುಚ್ಚಾ ಮನುಷ್ಯನನ್ನು ಹೊರಗೆ ದಬ್ಬಿಬಿಡು” ಎಂದು ಕಟ್ಟಪ್ಪಣೆ ಮಾಡಿದರು.

ಶಿಪಾಯಿಯು ಅದರಂತೆ ಬಂದು ಸದಾಶಿವನ ಕೈಯನ್ನು ಹಿಡಿದನು. ಆಗ ಸದಾಶಿವನ ಮೈಮೇಲೆ ಎಚ್ಚರವೇ ಇಲ್ಲದಾಯಿತು. ಹೊರಚಿಮ್ಮುವ ಸಿಟ್ಟಿನಿಂದ ಅವನು ಮೈಮರೆತನು. ಶಿಪಾಯಿಯು ಕೈಯನ್ನು ಹಿಡಿದ ಕೂಡಲೆ ಅವನ ಸಿಟ್ಟು ಹಿಡಿಯದಂತಾಯಿತು ಅವನು ಅತಿ ಕ್ರೋಧದಿಂದ ಅಲ್ಲಿಯೇ ಇಟ್ಟ ಖುರ್ಚಿಯನ್ನು ಮೇಲಕ್ಕೆತ್ತಿ ಡಾಕ್ಟರನ ಕಡೆಗೆ ಬಿರಿಗಣ್ಣುಗಳಿಂದ ನೋಡುತ್ತ, “ನಿಮ್ಮ

ಪ್ಪನೆ.......'' ಎಂದು ಬಾಯಿಂದ ಅನ್ನುತ್ತ, 'ನೀನು ಡಾಕ್ಟರನೋ ಕಲ್ಲೊದೆಯುವನಾದ ಮಂಗನೋ?' ಎನ್ನುತ್ತ ಕೈಯೊಳಗಿನ ಖುರ್ಚಿಯನ್ನು ಅವನ ಮೇಲೆ ಬಿಸಾಡತಕ್ಕವನು; ಅಷ್ಟರಲ್ಲಿಯೇ ಬದಿಯಲ್ಲಿ ಖುರ್ಚಿಯ ಮೇಲೆ ಕುಳಿತಿದ್ದ ಹಬ್ಬ ಯುರೋಪಿಯನ್ ಗೃಹಸ್ಥನು ಅವನನ್ನು ತಡೆದು ಹಿಡಿದನು. ಈ ಪ್ರಕಾರವನ್ನು ನೋಡಿ ದವಾಖಾನೆಯಲ್ಲಿದ್ದ ಎಲ್ಲರೂ ಗೊಂಬೆಗಳಂತೆ ಕುಳಿತರು.

ಇತ್ತ ಆ ಸಾಹೇಬನು ಸದಾಶಿವನನ್ನು ದವಾಖಾನೆಯ ಹೊರಗೆ ಕರೆದುಕೊಂಡು ಬಂದನು; ಮತ್ತು ಅವನ ಹೆಗಲ ಮೇಲೆ ಕೈಯನ್ನಿಟ್ಟು ಅವನನ್ನು ಪ್ರೇಮಪೂರ್ವಕವಾಗಿ ಸಂತೈಸಿದನು ಅವನ ಅಂತಃಕರಣಪೂರ್ವಕವಾದ ಶಬ್ದಗಳು ಸದಾಶಿವನ ಕಿವಿಗೆ ಬಿದ್ದೊಡನೆಯೇ ಅವನ ದುಃಖವು ಮತ್ತೆ ತುಂಬಿ ಬಂದು, ಅವನು ಬಿಕ್ಕಿ ಬಿಕ್ಕಿ ಅಳ ಹತ್ತಿದನು ಸಾಹೇಬನು ಅವನಿಗೆ ಕೆಲಹೊತ್ತಿನ ತನಕ ಹಾಗೆಯೇ ಅಳಗೊಟ್ಟನು. ಹೀಗೆ ಮಾಡುವದೇ ಶ್ರೇಯಸ್ಕರವಾಗಿತ್ತು. ಯಾಕೆಂದರೆ ಅದರಿಂದ ಅವನ ದುಃಖಭಾರವು ಎಷ್ಟೋ ಮಟ್ಟಿಗೆ ಕಡಿಮೆಯಾಗುವದೆಂದು ಅವನು ನೆರೆನಂಬಿದ್ದನು. ಸದಾಶಿವನು ದವಾಖಾನೆಗೆ ಬಂದಾಗಿನಿಂದ ಆ ಸಾಹೇಬನ ಲಕ್ಷ್ಯವು ಅವನ ಕಡೆಗೇ ಹೋಗಿತ್ತು.

ಅವನ ನಿರ್ಭಿಡೆಯ ಮಾತಿನ ಮೇಲಿಂದ, ಅಂಗವಿಕ್ಷೇಪ ಮತ್ತು ದೀನ ಚರ್ಯೆಗಳ ಮೇಲಿಂದ ಅವನ ಮನೆಯಲ್ಲಿ ಅತಿಗಂಡಾಂತರದಲ್ಲಿ ಸಿಕ್ಕ ಹಬ್ಬ ರೋಗಿಯು ಇರಬಹುದೆಂದೂ ಮತ್ತು ಅದರಿಂದಲೇ ಅವನು ಇಷ್ಟು ಲಗುಬಗೆಯಿಂದ ಡಾಕ್ಟರನನ್ನು ಕರೆಯಲಿಕ್ಕೆ ಬಂದಿರಬಹುದೆಂದೂ ಸಾಹೇಬರು ಊಹಿಸಿದ್ದರು. ಸ್ವಲ್ಪ ಹೊತ್ತಿನ ಮೇಲೆ ಸಾಹೇಬನ ಕಲ್ಪನೆಯ ಮೇರೆಗೆ ಸದಾಶಿವನ ದುಃಖದ ಉಕ್ಕು ಕಡಿಮೆಯಾಯಿತು. ಅವನ ಮನಸ್ಸಿನಲ್ಲಿ ಆದ

ರಿಂದ ತುಸ ಸಮಾಧಾನವೆನಿಸಿತು. ಆಗ್ಗೆ ಸಾಹೇಬನು ಅವನಿಗೆ ಪ್ರೇಮಪೂರ್ವಕವಾದ ಶಬ್ದಗಳಿಂದ ನಿಜವಾದ ಸಂಗತಿಯು ಏನಿರುವದೆಂಬದನ್ನು ಕೇಳಿಕೊಂಡನು. ಸದಾಶಿವನಿಗೆ ಸಾಹೇಬರ ಸಂಗಡ ಆಂಗ್ಲಭಾಷೆಯಲ್ಲಿ ಮಾತಾಡುವದು ಇದೇ ಮೊದಲನೇ ಪ್ರಸಂಗವಿದ್ದಾಗ್ಯೂ ಅವನು ಸುಲಭ ಭಾಷೆಯಿಂದ ಸ್ವಲ್ಪದರಲ್ಲಿಯೇ ಎಲ್ಲ ಸಂಗತಿಯನ್ನೂ ತಿಳಿಸಿ ಹೇಳಿದನು.

ಸದಾಶಿವನು ಡಾಕ್ಟರರ ಮೈಮೇಲೆ ಖರ್ಚ ಹಾಗೆಯುವಷ್ಟು ಸಿಟ್ಟಿಗೇಳಬೇಕಾದರೆ ಎಂಥ ಸಬಲ ಕಾರಣಗಳಿದ್ದವೆಂಬದು ಆ ಸಾಹೇಬನ ಪೂರಾ ಲಕ್ಷ್ಯಕ್ಕೆ ಬಂದಿತ್ತು. ಅವನು ಕ್ಷಣಹೊತ್ತಿನವರೆಗೆ ವಿಚಾರ ಮಾಡಿ, ಸದಾಶಿವನ ಕೈಹಿಡಿದುಕೊಂಡು ಮುಂದಕ್ಕೆ ಸಾಗಿದನು. ಇಲ್ಲಿಯೇ ಹಿಂದು ವ್ಹಿಕ್ಟೋರಿಯಾ ಗಾಡಿಯು ನಿಂತಿತ್ತು. ಗಾಡಿಯವನಿಗೆ ಸನ್ನೆಮಾಡಿದ ಕೂಡಲೆ ಅವನು ಅದನ್ನು ಅಲ್ಲಿಗೆ ತಂದು ನಿಲ್ಲಿಸಿದನು ಅವರಿಬ್ಬರೂ ಗಾಡಿಯಲ್ಲಿ ಕುಳಿತ ಕೂಡಲೆ, ಸಾಹೇಬನು ಅದನ್ನು ಹಿಂದು ವಿವಕ್ಷಿತ ಸ್ಥಳಕ್ಕೆ ಮುಟ್ಟಿಸಲು ಗಾಡಿಯವನಿಗೆ ಹೇಳಿದನು. ಕೆಲಕಾಲದಲ್ಲಿಯೇ ಚರ್ಚಗೇಟ ಓಣಿಯೊಳಗಿನ ಹಿಂದು ಭವ್ಯವಾದ ಕಟ್ಟಡದ ಹತ್ತಿರ ಗಾಡಿಯು ನಿಂತಿತು. ಸಾಹೇಬನು ಕೆಳಗಿಳಿದು ಸದಾಶಿವನ ಕೈಹಿಡಿದು ಅವನನ್ನೂ ಗಾಡಿಯಿಂದ ಇಳಿಸಿಕೊಂಡನು ಆ ಮೇಲೆ ಗಾಡಿಯವನ ಕೈಯಲ್ಲಿ ಅರ್ಧರೂಪಾಯಿಯನ್ನಿಟ್ಟು ಸಾಹೇಬನು ಸದಾಶಿವನೊಡನೆ ಪಾವಟಗೆಗಳನ್ನು ಹತ್ತಿ ಆ ಕಟ್ಟಡದ ಮೊದಲನೇ ಅಂತಸ್ತಿನ ಮೇಲೆ ಏರಿ ಹೋದನು. ಅದು ಹಿಂದು ಯುರೋಪಿಯನ್ ಡಾಕ್ಟರನ ದವಾಖಾನೆಯಾಗಿತ್ತು. ಸಾಹೇಬರ ಪದ್ಧತಿಯ ಮೇರೆಗೆ ನಮಸ್ಕಾರ-ಚಮತ್ಕಾರಗಳಾದ ಮೇಲೆ, ಸದಾಶಿವನನ್ನು ಕರಕೊಂಡು ಬಂದ ಸಾಹೇಬನು ಆ ಡಾಕ್ಟರನಿಗೆ ಅವನ

ವಿಷಯವಾಗಿ ಎಲ್ಲ ಸಂಗತಿಯನ್ನು ನಿಂತುಕೊಂಡೇ ಹೇಳಿದನು. ಮುಂದೆ ಕೆಲಹೊತ್ತಿನ ವರೆಗೆ ಅವರಿಬ್ಬರೂ ಸಾಹೇಬರು ಮೆಲ್ಲಗೆ ತಮ್ಮ ತಮ್ಮೊಳಗೆ ಏನೋ ಮಾತಾಡಿಕೊಂಡರು. ಸದಾಶಿವನು ಹುಚ್ಚನ ಹಾಗೆ ಸ್ತಬ್ಧನಾಗಿ ನಿಂತುಕೊಂಡುಬಿಟ್ಟಿದ್ದನು. ಕ್ಷಣ ಹೊತ್ತಿನ ಮೇಲೆ ಅವರಿಬ್ಬರ ಮಾತು ಮುಗಿಯಲು ಸಾಹೇಬನು ಸದಾಶಿವನ ಹೆಸರು ಸಹಿತವಾಗಿ ಮನೆಯ ವಿಳಾಸ ಬರೆಕೊಂಡು, ತನ್ನ ವಿಳಾಸದ ಕಾರ್ಡು ತೆಗೆದು ಅವನ ಕೈಯಲ್ಲಿ ಕೊಟ್ಟನು. ಅದನ್ನು ಸದಾಶಿವನು ತನ್ನ ಕಿಸೆಯಲ್ಲಿಟ್ಟುಕೊಂಡನು. ಆ ಮೇಲೆ ಆ ಮೂವರೂ ಕೆಳಗೆ ಇಳಿದು ಬಂದರು. ಅದೇ ವೇಳೆಗೆ ದಾರಿಯಲ್ಲಿ ಒಂದು ಬಾಡಿಗೆಯ ಮೋಟಾರವು ಹೋಗುತಲಿತ್ತು. ಅದನ್ನು ನಿಲ್ಲಿಸಿ ಡಾಕ್ಟರರು ಒಳಗೆ ಹತ್ತಿದರು; ಮತ್ತು ಸದಾಶಿವನನ್ನು ಒಳಗೆ ಕೂಡ್ರಿಸಿ ಆ ಸಾಹೇಬರು ಮೋಟಾರದ ಬಾಗಿಲವನ್ನು ಹಾಕಿದರು.

ತಮ್ಮಾ, ಈ ಡಾ. ಸಾಹೇಬರು ನಿನ್ನ ಸಂಗಡ ಬರುವರು. ಇನ್ನು ನೀನು ಏನೂ ಚಿಂತೆ ಮಾಡಬೇಡ. ಹೀಗೆಂದು ಸಾಹೇಬನು ಮೋಟರ ಡ್ರ್ಯಾಯವ್ಹರನಿಗೆ ಗಾಡಿಯನ್ನು ಎಲ್ಲಿಗೆ ಹೊಡೆಯಬೇಕೆಂಬದನ್ನು ಹೇಳಿದನು. ಮೋಟರ ಗಾಡಿಯು ಹೊರಳುವಾಗ ಸದಾಶಿವನ ದೃಷ್ಟಿಯು ಸಹಜವಾಗಿ ಮೇಲೆ ತೂಗಬಿದ್ದ ಡಾಕ್ಟರನ ಫಳಿಯ ಕಡೆಗೆ ಹೋಯಿತು. ಅದರ ಮೇಲೆ 'ಡಾ. ಪಾಯಸ್. ಎಮ್. ಡೀ. (ಲಂಡನ್)' ಎಂಬ ಅಕ್ಷರಗಳಿದ್ದವು. ಹಾ ಹಾ ಅನ್ನುವಷ್ಟರೊಳಗೆ ಮೋಟಾರು ಭರ್ರನೆ ಕಾಮಾ ಹಾಸ್ಪಿಟಲ್ಲದ ಬಾಗಿಲದ ಹತ್ತರ ಹೋಗಿ ನಿಂತಿತು. ಡಾ ಪಾಯಸ್‌ರು ಕೆಳಗಿಳಿದು ಒಳಗೆ ಹೋದರು. ಅಲ್ಲಿ ಬಲಮಗ್ಗಲಿಗೆ ಒಬ್ಬ ನರ್ಸಳು ನಿಂತಿದ್ದಳು. ಅವರಿಗೆ ಡಾ ಸಾಹೇಬರ ಗುರುತು ಹತ್ತಿದ ಕೂಡಲೆ

ಹಸನ್ಮುಖಿಯಾದಳು ಡಾ. ಸಾಹೇಬರು ಅವಳ ಹತ್ತರ ಹೋ-ದೊಡನೆ, “ನನ್ನ ಕಡೆಗೆ ಒಬ್ಬ ಬಡ ಹಿಂದೂ ಸ್ತ್ರೀಯು ಕೇಸು ಬಂದಿದೆ; ಆದ್ದರಿಂದ ನನಗೆ ಒಬ್ಬ ದೇಶೀ ‘ನರ್ಸ’ ಬೇಕಾಗಿದ್ದಾಳೆ. ನೀವು ಅದಕ್ಕಾಗಿ ನನ್ನ ಸಹಾಯಕ್ಕಾಗಿ ಎರಡು ತಾಸಿನ ವರೆಗೆ ಒಬ್ಬ ಏತದ್ದೇಶಿಯ ನರ್ಸಳನ್ನು ಕಳಿಸಿಕೊಡುವಿರಾ?” ಎಂದು ಕೇಳಿದನು.

“ಈಗ ಯಾವ ದೇಶೀ ನರ್ಸಳೂ ಕೆಲಸದ ಮೇಲಿಲ್ಲವೆಂದು ಹೇಳಲು ನನಗೆ ಬಲು ಖೇದವೆನಿಸುತ್ತದೆ; ಮತ್ತು ಬೇರೊಬ್ಬ ನರ್ಸಳನ್ನು ಕಳಿಸುವದು ನನಗ ಶಕ್ಯವಿಲ್ಲ” ಎಂದು ಹೇಳಿ ಕ್ಷಣ ಹೊತ್ತಿನ ವರೆಗೆ ಅವಳು ಸುಮ್ಮನಾದಳು. ಆ ಮೇಲೆ ‘ನೀವು ಹೀಗೆಯೇ ಗಿರಗಾಂವಿನ ಮೇಲೆ ಹಾಯ್ದು ಹೋದರೆ, ಅಲ್ಲಿ ನಿಮಗೆ ಒಬ್ಬಿಬ್ಬರು ಏತದ್ದೇಶೀಯ ನರ್ಸರು ಸಿಕ್ಕಾರು’ ಎಂದಳು.

ಇದಕ್ಕೂ ಹೆಚ್ಚಿಗೆ ಪ್ರಶ್ನೋತ್ತರಗಳನ್ನು ಬೆಳಿಸದೆ ಡಾ. ಸಾಹೇಬರು ಅವಳ ಆಭಾರವನ್ನು ಮನ್ನಿಸಿ ನೆಟ್ಟಗೆ ಹೊರಗೆ ಬಂದು ಮೋಟಾರದಲ್ಲಿ ಕುಳಿತುಕೊಂಡರು; ಮತ್ತು ಅದನ್ನು ಗಿರಗಾಂವದೊಳಗೆ ಹಾಯಿಸಿ ಹೊಡೆಯಲಿಕ್ಕೆ ಹೇಳಿದರು. ಆಗ ಸುಮಾರು ಐದು ಹೊಡೆಯುವ ವೇಳೆಯಾಗಿತ್ತು. ಡಾಕ್ಟರಸಾಹೇಬರು ಮಾರ್ಗದ ಎರಡೂ ಕಡೆಯಲ್ಲಿ ನೋಡುತ್ತ ನಡೆದಿದ್ದರು ಗಿರಗಾಂವದ ರಸ್ತೆಯ ಮೇಲೆ ಮೂರು ಅಂತಸ್ತುಗಳ ಕಲ್ಲಿನ ಇಮಾರತಿನ ಎರಡನೇ ಅಂತಸ್ತಿನ ಮೇಲೆ “ಮಿಸ್ ಸುಶೀಲಾಬಾಯಿ, ಮಿಡ್‌ವಾಯಿಫ್, ಜೇ. ಎಮ್. ಸೀ.” ಎಂಬ ಅಕ್ಷರಗಳುಳ್ಳ ಫಳಿಯು ನೇತಾಡುತ್ತಿತ್ತು. ಅದು ಕಣ್ಣಿಗೆ ಬಿದ್ದ ಕೂಡಲೆ ಡಾಕ್ಟರರು ಡ್ರಾಯವ್ಹರನಿಗೆ ಮೋಟಾರವನ್ನು ನಿಲ್ಲಿಸ ಹೇಳಿದರು. ಮೇಲಿನ ಅಂತಸ್ತಿನಿಂದ ಹಾರ್ಮೋನಿಯಮದ ಇಂಪಾದ ಸ್ವರದೊಡನೆ

ಮಂಜುಲವಾದ ಗಾನಾಲಾಪವು ಕೇಳಬರುತ್ತಿತ್ತು. ಡಾಕ್ಟರಸಾಹೇಬರು ಸದಾಶಿವನಿಗೆ ಮೋಟಾರದಲ್ಲಿಯೇ ಕೂಡ್ರಲಿಕ್ಕೆ ಹೇಳಿ, ತಾವೊಬ್ಬರೇ ಮೇಲೆ ಹತ್ತಿ ಹೋದರು.

ಮಿಸ್ ಸುಶೀಲಾಬಾಯಿಯು ತನ್ನ ಇಬ್ಬರು ಗೆಳತಿಯರೊಡನೆ ಹಾರ್ಮೋನಿಯಮ್ ಬಾರಿಸುತ್ತ ಹಾಡುತ್ತ ಕುಳಿತಿದ್ದಳು. ಆ ಕೋಣೆಯು ಚಿಕ್ಕದಾಗಿದ್ದರೂ ಅದನ್ನು ಒಳ್ಳೇ ವ್ಯವಸ್ಥಿತವಾಗಿ ಶೃಂಗರಿಸಿದ್ದರು. ಬಾಗಿಲಿಗೆ ಚೀನದ ತರತರದ ಬಣ್ಣಗಳಿಂದೊಪ್ಪುವ ಹುಲ್ಲಿನ ಪಡದೆಗಳನ್ನು ಇಳಿಬಿಟ್ಟಿದ್ದರು. ಗೋಡೆಗಳ ಮೇಲೆ ರಾಜಾರವಿವರ್ಮನ ದೊಡ್ಡ ದೊಡ್ಡ ಚಿತ್ರಪಟಗಳನ್ನು ತೂಗಹಾಕಿ ಅವುಗಳ ನಡುವೆ ಅಲ್ಲಲ್ಲಿ ಕುಂಡಗಳಲ್ಲಿ ಹಚ್ಚಿದ ಹೂವಿನಗಿಡಗಳನ್ನು ಜೋತು ಬಿಟ್ಟಿದ್ದರು. ಮಧ್ಯಭಾಗದಲ್ಲಿ ಒಂದು ‘ರಾವುಂಡ ಟೇಬಲ್’ ನ್ನಿಟ್ಟು ಅದರ ಸುತ್ತಲೂ ನಾಲ್ಕು ಖುರ್ಚಿಗಳನ್ನು ಮಂಡಿಸಿದ್ದರು. ಸುಶೀಲಾಬಾಯಿಯು ಹಾರ್ಮೋನಿಯಮ್ ಬಾರಿಸುತ್ತ ಕುಳಿತಿದ್ದಳು ಅವಳ ಎದುರಿಗೇ ಮತ್ತೊಂದು ಔಷಧ ಕೊಡುವ ಮೇಜಿನ ಮೇಲೆ ಔಷಧದ ಶೀಶೆಗಳಿಂದ ತುಂಬಿದ ಒಂದು ಕಪಾಟು ಇತ್ತು.

ಡಾಕ್ಟರರು ಮೇಲೆ ಹತ್ತಿಹೋಗಿ ಕ್ಷಣಹೊತ್ತಿನ ವರೆಗೆ ಬಾಗಿಲದ ಬಳಿಯಲ್ಲಿ ನಿಂತು, ಆ ಮೇಲೆ ಅದಕ್ಕೆ ಹಚ್ಚಿದ ಪಡದೆಯನ್ನು ಒತ್ತಟ್ಟಿಗೆ ಸರಿಸಿದರು. ಅವರನ್ನು ನೋಡಿದೊಡನೆ ಸುಶೀಲಾಬಾಯಿಯು ತನ್ನ ಗಾಯನವಾದನವನ್ನು ಅಷ್ಟಕ್ಕೇ ನಿಲ್ಲಿಸಿ ಎದ್ದು ನಿಂತಳು; ಮತ್ತು ಅವಳ ಸಹಚರಿಯರೂ ಎದ್ದು ಸ್ವಲ್ಪ ದೂರ ಸರಿದು ನಿಂತರು.

“ಮಿಸ್ ಸುಶೀಲಾಬಾಯಿ ಮಿಡ್‌ವಾಯಿಫ ಅಂದರೆ ನೀವೇ ಏನು?” ಎಂದು ಡಾಕ್ಟರ ಸಾಹೇಬರು ಕೈಯಲ್ಲಿ ಟೊಪ್ಪಿಗೆ ಹಿಡಿದುಕೊಂಡು ಕೇಳಿದರು. ಇದಕ್ಕೆ—

'ಹೌದು' ಎಂದು ಉತ್ತರ ಬಂತು.

"ನಾನು ಡಾಕ್ಟರ ಪಾಯಸ್‌ನು" ಹೀಗೆಂದು ಸನ್ಮಾನಾರ್ಥ ವಾಗಿ ಡಾ. ಸಾಹೇಬರು ತಮ್ಮ ಕೈಯನ್ನು ಮುಂದೆ ಮಾಡಿದರು.

ಪದ್ಧತಿಯ ಮೇರೆಗೆ ಹಸ್ತಾಂದೋಲನವಾದ ಮೇಲೆ ಡಾಕ್ಟ ರರು 'ದಾದರದಲ್ಲಿ ಒಬ್ಬ ಬಡ ಸ್ತ್ರೀಗೆ ಕೂಸು ಅಡ್ಡ ಸಿಕ್ಕಿರುವದು. ನಾನು ಅಲ್ಲಿಗೆ ಹೊರಟಿರುವೆನು; ಆದರೆ ನನಗೆ ಸಹಾಯ ಮಾಡಲು ಒಬ್ಬ ಮಿಡ್‌ವಾಯಿಫಳು ಬೇಕಾಗಿದ್ದಾಳೆ. ನೀವು ಬಂದರೆ ನೆಟ್ಟಗಾಗು ವದು. ಇದೊಂದು ಧರ್ಮಾರ್ಥ ಕೆಲಸವಿರುತ್ತದೆ' ಎಂದು ಅಂದನು.

"ಧರ್ಮಾರ್ಥ ಕೆಲಸವೇ? ಮತ್ತು ಅದೂ ದಾದರದಲ್ಲಿಯೇ?"

"ಹೌದು. ಕೆಳಗೆ ಮೋಟಾರವು ಸಿದ್ಧವಾಗಿ ನಿಂತಿದೆ"

ಮಿಸ್ ಸುಶೀಲಾಬಾಯಿಯು ಮೋರೆ ಸೊಟ್ಟಮಾಡಿ, "ಆದರೆ ನನಗೆ ತಮ್ಮಗೂಡ ಬರಲು ಅವಕಾಶವಿಲ್ಲವೆಂದು ಹೇಳಲು ಬಲು ವಿಷಾದವೆನಿಸುತ್ತದೆ. ನನಗೆ ೫|| ಗಂಟೆಗೆ ಸರಿಯಾಗಿ 'ಎಂಗೇಜ ಮೆಂಟ' (ಬೇರೆ ಕಾರ್ಯದ ಮೇಲೆ ಹೋಗುವದು)ಅದೆ; ಇಲ್ಲದಿದ್ದರೆ ನಾನು ನಿಮ್ಮ ಸಂಗಡ ಅತ್ಯಾನಂದದಿಂದ ಬರುತ್ತಿದ್ದೆನು." ಎಂದಳು. ಡಾ ಸಾಹೇಬರಿಗೆ ಬಹಳ ಕೆಡಕೆನಿಸಿತು.

"ಒಳ್ಳೇದು. ಹಾಗಾದರೆ ನಾನು ಹೋಗುತ್ತೇನೆ. ಶ್ರಮ ಪಡಿಸಿದ್ದಕ್ಕಾಗಿ ಕ್ಷಮೆಯಿರಲಿ.'' ಹೀಗೆಂದು ಡಾ. ಸಾಹೇಬರು ಮತ್ತೆ ಹೊರಗೆ ಬಂದರು.

ಅವರು ಹೋದ ಕೂಡಲೆ ಒಬ್ಬ ಗೆಳತಿಯು, "ಏನಿರೇ ಸುಶೀಲಾಬಾಯಿಯವರೇ, ಇವರ್ಯಾವ ಸಾಹೇಬರು? ಇವರ ಹೆಸರು ಏನು?"

"ಇವರೊಬ್ಬ ದೊಡ್ಡ ಡಾಕ್ಟರರಿರುವರು. ಇವರ ಹೆಸರು ಡಾಕ್ಟರ ಪಾಯಸ್, ಎಮ್. ಡೀ. ಎಂದಿರುವದು"

'ಆ-ಏನೆಂದರೆ ಇಂಥ ದೊಡ್ಡ ದೊಡ್ಡ ಡಾಕ್ಟರರು ನಿಮ್ಮ ಕಡೆಗೆ ಬರುವರೇ?"

"ಹೂ, ಬರದೆ ಏನು ಮಾಡ್ಯಾರು! ಅವರಿಗೆ ಬರಲಿಕ್ಕೇ ಬೇಕಾಗುತ್ತದೆ! ಅಂತೆಯೇ ಶಾಂತಾಬಾಯಿಯವರೇ, ನಾನು ನಿಮಗೆ ಆ ಶಾಲೆಯೊಳಗೆ ಹೆಣ್ಣುಮಕ್ಕಳಿಗೆ ಕಲಿಸುವ ಸೊಟ್ಟ ಕೆಲಸ ವನ್ನು ಬಿಟ್ಟು ನಮ್ಮ ಪರೀಕ್ಷೆಗೆ ಕೂಡಲಿಕ್ಕೆ ಇಷ್ಟು ಸಾರೆ ಹೇಳು ವದು ಎರಡೇ ವರ್ಷಗಳಲ್ಲಿ ನೀವೂ ಒಬ್ಬ ಮಿಡ್‌ವಾಯಿಫ ರಾಗುವಿರಿ"

"ಅದಿರಲಿ ಬಿಡ್ರೀ! ಆದರೆ ಆ ಡಾಕ್ಟರನು ಏನು ಕಾರಣ ಬಂದಿದ್ದನು?"

"ಅವನು ನನ್ನನ್ನು ಕರೆಯಲಿಕ್ಕೆಂದು ಬಂದಿದ್ದನು"

"ಹಾಗಾದರೆ ನೀವು ಹೋಗಲಿಲ್ಲವೇಕೆ?"

"ಪುಕ್ಕಟೆಯಾಗಿ ಯಾರು ಹೋಗಬೇಕು? ಧರ್ಮಕಾರ್ಯ ವಿದೆಯಂತೆ! ಧರ್ಮ ಕರ್ಮ ನಮಗೆ ತಕ್ಕೊಂಡು ಮಾಡುವದೇನು? ದುಡ್ಡಿದ್ದರೆ ಎಲ್ಲಾ ಬರುವದು!"

"ಆದರೂ ಏನಾಯಿತು ಪಾಪ! ಬಡ ಹೆಂಗಸು ಇದ್ದು ಕೂಸು ಅಡ್ಡ ಸಿಕ್ಕಿದೆಯಂತೆ! ನೀವು ಹೋಗಿದ್ದರೆ ಒಳ್ಳೇದಾಗುತ್ತಿತ್ತು."

"ಅಡ್ಡ ಸಿಕ್ಕರೇನಾಯಿತು? ಅದಕ್ಕೆ ನಾನೇನು ಮಾಡಲಿ? ಅಷ್ಟು ದೂರ ದಾದರಕ್ಕೆ ಒಂದು ಪೈ ಸಹ ಪ್ರಾಪ್ತಿ ಇಲ್ಲದೆ ಮೋರೆ ಯೊಣಗಿಸಿಕೊಂಡು ಅದಾರು ಹೋಗಬೇಕು?" ಎಂದು ಸುಶೀಲಾ ಬಾಯಿಯು ಡೌಲಿನಿಂದ ಗೋಣು ಹೊರಳಿಸುತ್ತ ಮಾತನಾಡಿದಳು; ಮತ್ತು ಕೂಡಲೆ ಮುಂದೆ ಮಾತು ಬೆಳೆಯಗೊಡಬಾರದೆಂದು ತನ್ನ ಹಾರ್ಮೋನಿಯಮವನ್ನು ಬಾರಿಸಲಿಕ್ಕೆ ಸುರುವು ಮಾಡಿ, "ಹೂ, ಶಾಂತಾಬಾಯಿ, ಒಂದು ಉತ್ತಮ ಪದವನ್ನು ಅನ್ನಿರಿ 'ಆ್ಯಕ್ಟಿಂಗ'

(ಹಾವಭಾವ) ಸಹಿತ ಅನ್ನಲಿಕ್ಕೆ ಬೇಕು ನೋಡಿರಿ.” ಎಂದು ನುಡಿದಳು.

“ಯಾವ ಹಾಡನ್ನು ಹಾಡಬೇಕು?”

ಅದಕ್ಕೇಕೆ ಇಷ್ಟು ವಿಚಾರ? ‘ಬಾರೋ ಪ್ರಿಯಾ ಬೇಗನೆ ಬಾ-ಬಾ,’ ಎಂಬ ಪದವನ್ನು ಅನ್ನಿರಿ; ಇಲ್ಲವೆ ಮುರಾರಿಯ ‘ನಾಹೀ ವಿಓ ಬೋಲತ ನಾಥಾ’ ಈ ಪದವನ್ನು ಅನ್ನಿರಿ. ಈ ಎರಡೂ ಹಾಡುಗಳಿಗೆ ‘ಆ್ಯಕ್ಟಿಂಗ್’ ಬಹಳ ಚನ್ನಾಗಿ ಇರುವದು. ಸುರುವು ಮಾಡಿರಿ.

ಪ್ರಿಯ ವಾಚಕರೇ, ನೋಡಿದಿರಾ ಲೋಕದ ಸ್ಥಿತಿಯನ್ನು! ಆಪತ್ಕಾಲದಲ್ಲಿದ್ದವರಿಗೆ ಸಹಾಯಮಾಡಬೇಕೆಂಬ ಧರ್ಮವು ಎಲ್ಲ ಡಗಿತೋ ತಿಳಿಯದು! ಜೀವಿತವು ಕ್ಷಣಭಂಗುರವಿದ್ದರೂ ಜನರು ಸ್ವಲ್ಪ ಕೂಡ ಆ ಕಡೆಗೆ ಲಕ್ಷ್ಯ ಕೊಡುವದಿಲ್ಲ ತಮ್ಮ ಹಿಣ ಹೆಮ್ಮೆಯಲ್ಲಿಯೇ ಮೆರೆದು ಹಿಂದು ದಿನ ಮಣ್ಣುಗೂಡಿ ಹೋಗು ವರು. ಇರಲಿ. ಮುಂದಿನ ಮಹತ್ವದ ಕಥಾಭಾಗದ ಕಡೆಗೆ ಅವಧಾನ ಕೊಡಿರಿ.

---

## ೭ನೆಯ ಪ್ರಕರಣ.

# ದೇವರಿಗೆ ದಯವಿಲ್ಲವೇ?

ಮೋಟಾರಗಾಡಿಯು ಬಾಯಖಳಾದ ಹತ್ತರ ಇರುವ ‘ನರ್ಸೀಸ್‌ಲಾಜ್’ದ ಬಳಿಗೆ ಬಂದ ಕೂಡಲೆ ಡಾಕ್ಟರ ಸಾಹೇಬರು ಅದನ್ನು ನಿಲ್ಲಿಸಲಿಕ್ಕೆ ಹೇಳಿದರು ಇದೇ ಸ್ಥಳದಲ್ಲಿ ಎಲ್ಲ ಯುರೋ ಪಿಯನ್ ಮತ್ತು ಯುರೇಜಿಯನ್ ನರ್ಸೀಸ್ (ದಾಯಿಗಳು)

ವಾಸ ಮಾಡಿಕೊಂಡಿದ್ದಾರೆ. ಡಾಕ್ಟರ ಸಾಹೇಬರು ಮೋಟರ ದಿಂದಿಳಿದು, ಅವರು ಹಿಂದು ಇಮಾರತಿಯ ಕಡೆಗೆ ನಡೆದರು ಅದರ ಪಾವಟಿಗೆಗಳ ಹತ್ತರವೇ ಹಿಂದು ದೊಡ್ಡ ಫಳಿಯನ್ನು ತೂಗೆ ಬಿಟ್ಟಿದ್ದು ಅದರ ಮೇಲೆ ಪ್ರತಿಯೊಬ್ಬ ನರ್ಸಳ ಹೆಸರನ್ನೂ, ಅವಳು ಎಷ್ಟನೆಯ ಕೋಣೆಯಲ್ಲಿರುತ್ತಾಳೆಂಬದನ್ನೂ ಮತ್ತು ಹೊಳಗೆ ಇರುವಳೋ ಇಲ್ಲವೆ ಹೊರಗೆ ಹೋಗಿರುವಳೋ ಎಂಬದರ ವಿಷಯಕ್ಕೂ ಎಲ್ಲ ಸಂಗತಿಯನ್ನೂ ಬರೆದಿದ್ದರು. ಡಾ ಸಾಹೇಬರು ಆ ಫಳಿಯಕಡೆಗೆ ನೋಡಿ ಯಾವ ನರ್ಸಳು ಸದ್ಯಕ್ಕೆ ಅಲ್ಲಿರುವಳೆಂಬದನ್ನು ತಿಳಕೊಂಡರು. ಆದರಲ್ಲಿ ಮೊದಲಿಗೆ "ಮಿಸ್ ಮೇರಿ ಟೆಂಪಲ್ ಸೆಕಂಡ ಫ್ಲೋಅರ, ಟೆಂಥ ರೂಮ್-ಇನ್"(ಮಿಸ್‌ಮೇರೀಟೆಂಪಲ್, ಎರಡನೇ ಅಂತಸ್ತು ಹತ್ತನೇ ಖೋಲಿ, ಹೊಳಗೆ ಇದ್ದಾರೆ) ಎಂದು ಬರೆದಿತ್ತು. ಅದನ್ನು ಓದಿದ ಕೂಡಲೆ ಅವರು ಅಲ್ಲಿಯೇ ಬಳಿಯಲ್ಲಿದ್ದ ಟೆಲಿಫೋನದ 'ಬಟನ್ (ಗುಂಡಿ)'ವನ್ನು ಹಿತ್ತಿದರು. ಅವರು ಕೆಲವು ವೇಳೆ ಟೆಲಿಫೋನಿನಲ್ಲಿ ಮಾತಾಡಿದ ಮೇಲೆ ಮೂವತ್ತೈದು ವರ್ಷದ ಹಿಬ್ಬ ನರ್ಸಳು ವೇಗದಿಂದ ಪಾವಟಿಗೆ ಇಳಿದು ಬಂದಳು. ಇಬ್ಬರದೂ 'ಗುಡ್ ಈವ್ನಿಂಗ' ಎಂದು ನಮಸ್ಕಾರವಾದ ಮೇಲೆ ಡಾ ಸಾಹೇಬರು ಸ್ವಲ್ಪದರಲ್ಲಿಯೇ ತಾವು ಬಂದ ಕಾರಣವನ್ನು ತಿಳಿಸಿದರು; ಮತ್ತು ವಸ್ತುಸ್ಥಿತಿಯು ಹೀಗೆ ಅದೆ. ಇದು ಹಿಬ್ಬ ಹಿಂದೂ ಸ್ತ್ರೀಯ ಕೇಸು ಇದ್ದದರಿಂದ, ಯಾವಳಾದರೊಬ್ಬ ದೇಶೀಯ ನರ್ಸ ಇಲ್ಲವೆ ಮಿಡ್‌ವಾಯಿಫ ಸಿಗಬೇಕೆಂದು ನನ್ನ ಇಚ್ಛೆ ಇತ್ತು; ಆದರೆ ಯಾರೂ ದೊರೆಯಲಿಲ್ಲ ಇದಕ್ಕಂತೇ ನಾನು ಇತ್ತ ಕಡೆಗೆ ಬಂದೆನು. ಇದು ಹಿಂದು ಧಾರ್ಮಿಕ ಕೃತ್ಯ(Charity) ವಿರುವದು. ಆದ್ದರಿಂದ ನೀವು ಬರುವಿರೋ ಹೇಗೆಂದು ಕೇಳಲು, ಬಂದಿರುವೆನು.

“ಬರುತ್ತೀರೇನೆಂದು ಏಕೆ ಕೇಳುವದು? ‘ಚಾರಿಟಿ’ಯ ಕೇಸು ನೋಡುವದೇ ನನ್ನ ಆದ್ಯ ಕರ್ತವ್ಯವಾಗಿದೆ. ಸ್ವಲ್ಪ ತಡೆಯಿರಿ, ನಾನು ಈಗಲೇ ಬರುತ್ತೇನೆ” ಎಂದು ಅವಳು ಉತ್ತರವನ್ನಿತ್ತಳು

ಐದು ಮಿನಿಟುಗಳೊಳಗೇ ನರ್ಸಳು ಕೆಳಗಿಳಿದು ಬಂದಳು. ಅವಳ ಬಲಗೈಯಲ್ಲಿ ಶುಭ್ರವಾದ ಟಾವೆಲ್ಲಿನಲ್ಲಿ ಸುತ್ತಿದ ಕೆಲವು ಅರಿವೆಗಳೂ ಮತ್ತು ಎಡಗೈಯಲ್ಲಿ ಒಂದು ಸುಂದರವಾದ ಚರ್ಮದ ಬ್ಯಾಗೂ(ಪಾಕೀಟು)ಇದ್ದವು ಅವಳು ಬಂದೊಡನೆಯೇ ಡಾಕ್ಟರರು ತಮ್ಮ ಹತ್ತರ ಮೋಟಾರಿನಲ್ಲಿ ಕುಳ್ಳಿರಿಸಿಕೊಂಡು ಮೋಟಾರಿನವನಿಗೆ ಗಾಡಿಯನ್ನು ವೇಗದಿಂದ ನಡಿಸಲಿಕ್ಕೆ ಹೇಳಿದರು. ಮೋಟಾರವು ಹಾ ಹಾ ಅನ್ನುವಷ್ಟರೊಳಗಾಗಿ ದಾದರದ ಪೇಟೆಯ ಹತ್ತರ ಬಂದು ಮುಟ್ಟಿತು. ಆಗ ಅದೇ ೫|| ಗಂಟೆಯಾಗಿತ್ತು ಪಾಪ! ಸದಾಶಿವನು ಡಾಕ್ಟರರ ಎದುರಿಗೆ ಕಲ್ಲಿನ ಗೊಂಬೆಯಂತೆ ಕುಳಿತಿದ್ದನು. ಬಾಯಖಳಕ್ಕೆ ಬಂದಕೂಡಲೆ ಗಾಡಿ ನಿಂತದ್ದು, ಮುಂದೆ ಸ್ವಲ್ಪ ಹೊತ್ತಿನ ಮೇಲೆ ಒಬ್ಬ ನರ್ಸಳು ಬಂದು ಕುಳಿತ ಬಳಿಕ ಗಾಡಿಯು ಬಲು ವೇಗದಿಂದ ಮುಂದೆ ಸಾಗಿದ್ದೂ ಕಣ್ಣಾರೆ ಕಂಡಿದ್ದರೂ ಅವುಗಳಲ್ಲಿ ಒಂದರ ಕಡೆಗೆ ಕೂಡ ಅವನ ಪೂರ್ಣ ಲಕ್ಷ್ಯವೇ ಇರಲಿಲ್ಲ ಯಾಕಂದರೆ ಅವನು ಆತ್ಮವಿಚಾರದಲ್ಲಿಯೇ ತೀರ ಮಗ್ನನಾಗಿ ಹೋಗಿದ್ದನು; ಆದರೆ ತಾನು ಏನು ವಿಚಾರಮಾಡುತ್ತಿರುವೆನೆಂಬದು ಸಹ ಅವನಿಗೆ ತಿಳಿಯುತ್ತಿರಲಿಲ್ಲ! ಅವನು ಇಷ್ಟು ಪ್ರಜ್ಞಾಶೂನ್ಯನಾಗಿ ಹೋಗಿದ್ದನು! ಮೋಟಾರವು ದಾದರ ಸ್ಟೇಶನ್ನಿನ ಹತ್ತರ ಹೋದ ಕೂಡಲೆ ಡ್ರಾಯಿವ್ಹರನು “ಇನ್ನು ಎಲ್ಲಿಗೆ ಹೋಗಬೇಕು?” ಎಂದು ಹಿಂದುಂಗಿ ಕೇಳಿದನು ಆಗ ಸದಾಶಿವನು ಒಮ್ಮಿಂದೊಮ್ಮೆ ಎಚ್ಚತ್ತನು ಮೊದಲು ಅವನ ದೃಷ್ಟಿಯು ಎದುರಿಗೆ ಕುಳಿತಿರುವ ನರ್ಸಿನ ಕಡೆಗೆ ಹೋಯಿತು. ಈ ಹೆಂಗಸು ಮೋಟಾರಿನಲ್ಲಿ

ಯಾವಾಗ ಬಂದಳೆಂಬದರ ಬಗ್ಗೆ ಅವನಿಗೆ ಕ್ಷಣಹೊತ್ತಿನ ವರೆಗೆ ಭ್ರಾಂತಿಯಾಯಿತು ಅದೇ ವೇಳೆಗೆ ತನ್ನ ಕಾಲಿನ ಹತ್ತರ ಇಟ್ಟದ್ದ ಬ್ಯಾಗಿನ ಕಡೆಗೆ ಅವನ ದೃಷ್ಟಿಯು ಬಿತ್ತು. ಇಷ್ಟರೊಳಗೇ ಒಂದರ ಹಿಂದೊಂದು ಸಂಗತಿಗಳು ಅವನಿಗೆ ನೆನಪಾಗಹತ್ತಿದವು; ಮತ್ತು ಅವನು ಭ್ರಮಿಷ್ಟನಂತೆ ಡಾಕ್ಟರರ ಮೋಟರಿಯ ಕಡೆಗೆ ನೋಡುತ್ತ ಕುಳಿತನು ಡಾಕ್ಟರರು ಕೂಡಲೆ ಅವನ ಮನೋಸ್ಥಿತಿಯನ್ನು ಕಂಡುಹಿಡಿದರು; ಮತ್ತು ಅವನಿಗೆ "ನೀನು ಈ ಪರಿ ಗಾಬರಿ ಯಾಗಬೇಡ; ನಾವು ಈಗ ದಾದರಕ್ಕೆ ಬಂದು ಮುಟ್ಟಿದ್ದೇವೆ. ನಿಮ್ಮ ಮನೆ ಎಲ್ಲಿ ಇದೆ, ತೋರಿಸು." ಎಂದು ಕೇಳಿದರು.

ಸದಾಶಿವನು ತನ್ನ ಗಹನವಾದ ವಿಚಾರಗಳೊಳಗಿಂದ ಎಚ್ಚತ್ತನು ಅವನು ಅತ್ತಿತ್ತ ನೋಡಿದನು. ತಾವು ಇಷ್ಟು ತೀವ್ರವೇ ದಾದರಕ್ಕೆ ಹೇಗೆ ಮುಟ್ಟಿದೆವೆಂಬದರ ಬಗ್ಗೆ ಅವನಿಗೆ ಆಶ್ಚರ್ಯವೆನಿಸಿತು. ಅವನು ಡ್ರಾಯವ್ಹರನಿಗೆ ತನ್ನ ಮನೆಯ ಮಾರ್ಗವನ್ನು ತೋರಿಸಿದನು ಅಲ್ಪ ವೇಳೆಯಲ್ಲಿಯೇ ಮೋಟಾರವು ಅವನ ಮನೆಯ ಬಾಗಿಲಿಗೆ ಬಂದು ನಿಂತಿತು.

ಸದಾಶಿವನ ಕೂಡ ಸಾಹೇಬನೂ, ಮಡಮ್ಮನೂ ಬಂದದ್ದನ್ನು ನೋಡಿ ಆ ಬೀದಿಯೊಳಗಿನ ಜನರೆಲ್ಲ ಹೊರಗೆ ಬಂದು ನಿಂತರು. ವಾಚಕರೇ, ನಾವು ಇನ್ನು ಕ್ಷಣ ಹೊತ್ತು ಕೃಷ್ಣೆಯ ಕಡೆಗೆ ತಿರುಗೋಣ. ಅವಳು ಇನ್ನೂ ತನಕ ನಾವು ನೋಡಿದಾಗಿನ ಸ್ಥಿತಿಯಲ್ಲಿಯೇ ಇದ್ದು, ತನಗಾಗುವ ಅಸಹ್ಯಕರವಾದ ವೇದನೆಗಳನ್ನು ತಡೆಯಲಾರದೆ ನೆಲದ ಮೇಲೆ ಹೊರಳಾಡುತ್ತ ಬಿದ್ದಿದ್ದಳು. ಅತ್ಯಾಬಾಯಿಯೂ, ದುರ್ಗಾದೇವಿಯೂ, ಭಾಗೀರಥಿದೇವಿಯೂ ಇಷ್ಟೊತ್ತಿನ ವರೆಗೆ ಸದಾಶಿವನ ದಾರಿಯನ್ನು ನೋಡಿ, ಕಡೆಗೆ ನೆರೆ ಮನೆಯ ಒಬ್ಬ ಹುಡುಗನನ್ನು ಮತ್ತೆ ಡಾಕ್ಟರರನ್ನು ಕರೆಯಲಿಕ್ಕೆ

ಕಳಿಸಿದ್ದರು. ಆ ಹುಡುಗನು ಡಾ ದಾದರಕರರ ದವಾಖಾನೆಗೆ ಹೋಗಿ ಬಂದನು; ಆದರೆ ಡಾ ಸಾಹೇಬರು ಇನ್ನೂ ವರೆಗೆ ದವಾಖಾನೆಗೆ ಬಂದಿದ್ದೇ ಇಲ್ಲ. ಆ ಮೇಲೆ ಒಬ್ಬ ಸೂಲಗಿತ್ತಿಯುನ್ನು ಕರೆತಂದರು. ಅವಳು ಕೆಲಹೊತ್ತಿನ ವರೆಗೆ ಶಕ್ಯವಿದ್ದಷ್ಟು ಪ್ರಯತ್ನ ಮಾಡಿ ನೋಡಿದಳು; ಆದರೆ ಅವಳಿಗೂ ಬಗೆ ಹರಿಯಲಿಲ್ಲ ಇಷ್ಟಾಗುವದರೊಳಗೇ ಬಾಗಿಲಿಗೆ ಮೋಟಾರಗಾಡಿಯು ಬಂದು ನಿಂತಿತು ಕೂಡಲೆ ಭಾಗೀರಥಿದೇವಿಯು, 'ನನ್ನ ಸದಾಶಿವನು ದೊಡ್ಡ ಡಾಕ್ಟರರನ್ನು ಕರಕೊಂಡು ಬಂದನು.' ಎಂದು ನುಡಿದಳು. ಈ ಶಬ್ದಗಳು ಕಿವಿಗೆ ಬಿದ್ದೊಡನೆ ಕೃಷ್ಣೆಯು ಒಂದು ಸಾರೆ ತಲೆಯೆತ್ತಿ ಬಾಗಿಲದ ಕಡೆಗೆ ನೋಡಿದಳು. ಡಾಕ್ಟರನು ಬಂದರೆಂಬ ಸುದ್ದಿಯನ್ನು ಕೇಳಿದ ಕೂಡಲೆ ಅವಳ ಮನಸ್ಸಿನ ಮೇಲೆ ಒಂದು ತರದ ಪರಿಣಾಮವಾಯಿತು. ಅವಳು ಒಂದು ದೀರ್ಘ ಶ್ವಾಸವನ್ನು ಬಿಟ್ಟಳು.

ನರ್ಸ ಮೇರಿಯು ಮುಂದಕ್ಕೆ ಬಂದು, ಪ್ರೇಮಳ ಮತ್ತು ಮಂಜುಳವಾದ ಧ್ವನಿಯಿಂದ "ಸರ್ವ ಸ್ತ್ರೀಯರೂ ಒಂದಿಷ್ಟು ದೂರ ಸರಿಯಿರಿ. ತಂಗೀ, ಅಂಜಬೇಡವ್ವಾ. ನೀನು ಇದೇ ಈಗ ಸುಖರೂಪವಾಗಿ ಪ್ರಸೂತಳಾಗುವಿ. ಶಾಬಾಸ್! ಬಹಳ ನೆಟ್ಟಗೆ ಕುಳಿತಿರುವಿ! ನಿನಗೆ ಸ್ವಲ್ಪ ತ್ರಾಸವಾಗಿರಬಹುದಲ್ಲವೇ? ಆದರೂ ಹೆದರಬೇಡ. ನಾವು ತಕ್ಕ ಸಮಯಕ್ಕೆ ಬಂದೊದಗಿದ್ದೇವೆ" ಎಂದು ಮೃದುವಾಗಿ ಮಾತಾಡಿದಳು.

ಕೃಷ್ಣೆಯು ತನಗಾಗುವ ವೇದನೆಗಳಿಂದ ತನ್ನ ಮೈಯನ್ನು ಶೀರ ಮುದುಡಿಕೊಂಡು ಕುಳಿತಳು; ಮತ್ತು ಅಂಥ ಸ್ಥಿತಿಯಲ್ಲಿ ಹಾಗೆಂದೂ ಕೂಡ್ರತಕ್ಕದ್ದಲ್ಲ; ಹೀಗಿದ್ದರೂ ಅಕೆಗೆ ಹಾಗೇಕೆ ಕುಳಿತಿರುವೆಯೆಂದು ಕೇಳದೆ, ನರ್ಸಳು ಅವಳನ್ನು ಸರಿಯಾಗಿ ಕುಳ್ಳಿ

ರಿಸಿ ಒಳ್ಳೇ ಜಾಣತನದಿಂದ ಆ ಕೋಣೆಯೊಳಗಿನ ಗದ್ದಲವನ್ನು ಕಡಿಮೆ ಮಾಡಿದಳು. ಅವಳ ಹಸ್ತಸ್ಪರ್ಶವಾದ ಕೂಡಲೆ ಕೃಷ್ಣೆಗೆ ಒಂದು ತರದ ವಿಲಕ್ಷಣವಾದ ಭಾವನೆಯುಂಟಾಯಿತು ತಾನು ಸುರಕ್ಷಿತವಾಗಿ ಪ್ರಸೂತಳಾಗುವೆನೆಂಬದರ ಬಗ್ಗೆ ಅವಳಿಗೆ ಒಂದು ತರದ ನಂಬಿಗೆಯುಂಟಾಯಿತು; ಮತ್ತು ಅದೇ ಭಾವನೆಯಿಂದ ಅವಳ ಕಣ್ಣೀರುಗಳು ಸುರಿಯುತೊಡಗಿದವು. ನರ್ಸಳು ತನ್ನ ಕರ ವಸ್ತ್ರದಿಂದ ಅವಳ ಕಣ್ಣೀರನ್ನು ಒರಿಸಿದಳು; ಮತ್ತು ಅಸ್ತವ್ಯಸ್ತ ವಾದ ಅವಳ ತಲೆಗೂದಲುಗಳನ್ನು ಸರಿಗೂಳಿಸುತ್ತ ಅವಳು "ಮಗಳೇ ಅಂಜಬೇಡ; ಈ ಡಾಕ್ಟರಸಾಹೇಬರು ನಿನ್ನ ಪ್ರಕೃತಿಯನ್ನು ಪರೀಕ್ಷಿಸುವರು. ನೀನು ಹೀಗೆ ಬಿಗಿ ಒಡಿದು ಉಸುರಾಡಿಸಬೇಡ ಗಂಟಲು ಸಡಿಲು ಬಿಟ್ಟು ಉಸುರಾಡಿಸು. ನಿನ್ನೆಯೇ ಒಬ್ಬ ಹೆಂಗಸು ನಿನಗಿಂತಲೂ ಕಠಿಣ ಸ್ಥಿತಿಯಲ್ಲಿದ್ದು ಈ ಡಾಕ್ಟರ ಸಾಹೇಬರ ಕೈಗುಣದಿಂದ ಸುಲಭವಾಗಿ ಪ್ರಸೂತಳಾದಳು! ಅಹಹಾ! ಆಕೆಯ ಗಂಡುಕೂಸು ಎಷ್ಟು ಸುಂದರವಿತ್ತು!" ಎಂದು ಸ್ವಚ್ಛವಾಗಿ ಕನ್ನಡ ಭಾಷೆಯಲ್ಲಿ ಮಾತಾಡಿದಳು.

ಕೃಷ್ಣೆಯು ಈ ಪರಿ ದುಃಖದಲ್ಲಿದ್ದರೂ, ಅವಳಿಗೆ ಆ ನರ್ಸಿನ ಕಕ್ಕುಲತೆಯ ಮಾತುಗಳನ್ನು ಕೇಳುತ್ತಲೇ ಕೂಡ್ರಬೇಕೆಂದು ಅನಿ ಸಿತು. "ಈ ಡಾಕ್ಟರರ ದಯದಿಂದ ನಿನ್ನೆಯೇ ಒಬ್ಬ ಸ್ತ್ರೀಯು ಪ್ರಸೂತಳಾಗಿ ಅವಳಿಗೆ ಒಂದು ಚಲುವಾದ ಗಂಡುಕೂಸು ಹುಟ್ಟಿ ತೆಂಬದನ್ನು" ಆ ನರ್ಸಳ ಬಾಯಿಂದ ಕೇಳಿ, ಅವಳ ಮನಸ್ಸಿನ ಮೇಲೆ ಒಳ್ಳೇ ವಿಲಕ್ಷಣವಾದ ಪರಿಣಾಮವುಂಟಾಯಿತು; ಮತ್ತು ಅದರಂತೆಯೇ ಮಾಟವಾದ ಮುದ್ದುಮೊಗವು ತನಗಾದರೂ ಹುಟ್ಟೀ ತೆಂದು ಅವಳಿಗೆ ದೃಢಭಾವನೆಯುಂಟಾಯಿತು ಈ ಮೇರೆಗೆ ಆ ನರ್ಸಳು ಒಳಗೆ ಬಂದಕೂಡಲೆ ತನ್ನ ಮಧುರ ಶಬ್ದಗಳಿಂದ

ಕೃಷ್ಣೆಯ ದುಃಖದ ಭಾರವನ್ನು ಕಡಿಮೆ ಮಾಡಿ, ಅವಳ ಮನದಲ್ಲಿ ಆ ಪರಿಸ್ಥಿತಿಗೆ ಅನುಕೂಲವಾದ ಭಾವನೆಯನ್ನುಂಟು ಮಾಡಿದಳು. ನಿಜವಾಗಿ ನೋಡಿದರೆ, ಅವಳು ಡಾಕ್ಟರರ ವಿಷಯವಾಗಿ ನುಡಿದ ಸಂಗತಿಯೂ, 'ಆಹಹಾ ಎಂಥ ಸುಂದರವಾದ ಗಂಡುಕೂಸು' ಎಂಬ ಸಂಗತಿಯೂ ಕಾಲ್ಪನಿಕವಿದ್ದವು; ಆದರೆ ಆಕೆ ಸುಳ್ಳಿನ ಕಡೆಗೆ ಲಕ್ಷ್ಯಗೊಡದೆ ಸಮಯಕ್ಕೆ ಸರಿಯಾಗಿ ಕೃಷ್ಣೆಯ ಮನದಲ್ಲಿ ಅನುಕೂಲ ಭಾವನೆಯನ್ನುಂಟು ಮಾಡುವದಕ್ಕಾಗಿ ಅವಳು ಒಳ್ಳೇ ಸಮಯಸೂಚಕತೆಯನ್ನು ತೋರಿಸಿದಳು.

ಪ್ರಿಯವಾಚಕರೇ! ಡಾಕ್ಟರರೂ, ನರ್ಸಳೂ ಕೃಷ್ಣೆಯ ಬಳಿಗೆ ಬಂದ ಕೂಡಲೆ ಅವಳ ದುಃಖವನ್ನು ಹ್ಯಾಗೆ ದೂರ ಮಾಡಿದರೆಂಬ ಸಂಗತಿಯು ನೀವೆಲ್ಲರೂ ಒಳ್ಳೇ ವಿಚಾರ ಮಾಡತಕ್ಕಂಥಾದ್ದಾಗಿದೆ. ಸ್ತ್ರೀಯರಿಗೆ ಬಸರು, ಬಾಣಂತಿತನಗಳೆಂಬ ಎರಡೂ ಅವಸ್ಥೆಗಳು ಸೃಷ್ಟಿನಿಯಮಕ್ಕನುಸರಿಸಿಯೇ ಪ್ರಾಪ್ತವಾಗುತ್ತವೆ; ಮತ್ತು ಅವುಗಳೊಳಗಿಂದ ಸುರಕ್ಷಿತವಾಗಿ ಪಾರುಮಾಡುವಶಕ್ತಿಯೂ ಈ ಸೃಷ್ಟಿನಿಯಮಗಳಲ್ಲಿ ಪೂರ್ಣವಾಗಿ ತುಂಬಿರುತ್ತದೆ. ನಾವು ಅದರಲ್ಲಿ ನಿಷ್ಕಾರಣವಾಗಿ ಏನಾದರೂ ಹೆಚ್ಚು-ಕಡಿಮೆ ಮಾಡಿದರೆ, ಅದರಿಂದ ಗರ್ಭಿಣೀ ಸ್ತ್ರೀಗೆ ಬಾಣಂತಿತನದಲ್ಲಿ ತ್ರಾಸವಾಗದೆ ಇರದು ಪ್ರಸೂತಿಯ ಸಮಯದಲ್ಲಿ ಬಳಿಯಲ್ಲಿ ಕುಳಿತ ಎಷ್ಟೋ ಹೆಂಗಸರು, ತಮ್ಮ ಹುಚ್ಚು ತಿಳುವಳಿಕೆಯ ಮೇರೆಗೆ ಏನಾದರೂ ಉಪಚಾರಗಳನ್ನು ಮಾಡುತ್ತಿರುತ್ತಾರೆ. ಕೆಲವರಂತೂ ಸುಮ್ಮನೆ ಕೂಡ್ರದೆ ತಮ್ಮ-ತಮ್ಮೊಳಗೆ ಅಭದ್ರ ಮಾತುಗಳನ್ನಾಡುವದರಿಂದ ಪ್ರಸೂತಿಯ ಕಾಲದಲ್ಲಿ ಬೇನೆ ತಿನ್ನುವ ಸ್ತ್ರೀಯ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವಾದರೂ ಆಗುವದು ನಮ್ಮ ಹೆಂಗಸರಲ್ಲಿಯಂತೂ ಇದೊಂದು ಕೆಟ್ಟ ಚಟವು ಇದ್ದೇ ಇರುವದು. ಅವರಿಗೆ ಗರ್ಭಿಣಿ

ಸ್ತ್ರೀಯರನ್ನು ಎದೆಗುಂದಿಸುವಂಥ ಮಾತುಗಳನ್ನು ಆಡಲಿಕ್ಕೆ ಬೇರೆ ವೇಳೆಯೇ ದೊರೆಯುವದಿಲ್ಲ. ಇದರಂತೆಯೇ ಅವರಲ್ಲಿ ಒಬ್ಬಳು, 'ನಮ್ಮ ಎಶೋದೆಗಾದರೂ ಹೀಗೆಯೇ ಕೂಸು ಅಡ್ಡ ಸಿಕ್ಕಿತ್ತು; ಆದರೆ ನಾನು ಅಲ್ಲಿ ಇದ್ದೆನೆಂತಲೇ ಹುಡುಗೆಯು ಬದುಕಿಕೊಂಡಿತು. ಏನು ಹೇಳಲಿ? ನಾನು ಕಡೆಗೆ....... ಮಾಡಿಸಿದಾಗಲೇ ಅವಳು ಆ ಕುತ್ತಿನಿಂದ ಪಾರಾದಳು!' ಎಂದಳು. ಅಷ್ಟರಲ್ಲಿಯೇ ಮತ್ತೊಬ್ಬಳು, 'ನಮ್ಮ ನೆರಮನೆಯ ಲಕ್ಷ್ಮಂಬಾಯಿಯ ಮಗಳ ಗತಿಯಾದರೂ ಹೀಗೇ ಆಯಿತು ನೋಡಿರಿ! ಪಾಪ! ಹುಡುಗೆಯು ಒಂದೇ ಸವನೆ ತೊಳಲುತ್ತ ಬಿದ್ದಿದ್ದಳು; ಕಟ್ಟಕಡೆಗೆ ಆಕೆಗೂ ನೀವು ಹೇಳಿದಂತೆ,........ವನ್ನೇ ಮಾಡಿಸಬೇಕಾಯಿತು!' ಹೀಗೆ ಅಲ್ಲಿ ಕೂಡಿದ ಹೆಂಗಸರಲ್ಲಿ ಅನೇಕ ಬಗೆಯ ಮಾತುಗಳು ನಡೆದಿರುತ್ತವೆ; ಆದರೆ ಬೇನೆಗಳ ಅಸಹ್ಯವಾದ ವೇದನೆಗಳನ್ನು ತಾಳಲಾರದೆ ತೊಳಲುತ್ತ ಬಳಲುತ್ತ ಬಿದ್ದಿರುವ ಆ ಬಡಪ್ರಾಣಿಯ ಮನಸ್ಸಿನ ಮೇಲೆ ಈ ಬಗೆಯ ವ್ಯರ್ಥವಾದ ಮಾತುಗಳಿಂದ ಎಂಥ ವಿಪರೀತ ಪರಿಣಾಮವಾಗುವದೆಂಬ ಮಾತು ಯಾರ ಕಲ್ಪನೆಯಲ್ಲಿಯೂ ಬರುವದಿಲ್ಲ.

ನರ್ಸ ಮೇರಿಯು ಒಳಗೆ ಬಂದ ಕೂಡಲೆ, ಮೊದಲು ಅಲ್ಲಿ ನೆರೆದಿದ್ದ ಹೆಂಗಸರನ್ನು ಹೊರಗೆ ಕಳಿಸಿದ್ದಕ್ಕೆ ಇದೇ ಕಾರಣವು ಅವಳು ತನ್ನ ಅಕ್ಕರತೆಯ ಮಾತುಗಳಿಂದ ಕೃಷ್ಣೆಯ ಮನಸ್ಸನ್ನು ಹುರುಪುಗೊಳಿಸಿದಳು. ಕ್ಷಣಹೊತ್ತಿನ ವರಗೆ ಡಾಕ್ಟರರೂ, ನರ್ಸಳೂ ತಮ್ಮ ತಮ್ಮೊಳಗೆ ಮಾತಾಡಿದ ಮೇಲೆ ಅವಳು ಕೃಷ್ಣೆಯನ್ನು ಮೆಲ್ಲಗೆ ಒಂದು ಮೂಲೆಯಲ್ಲಿ ಒಯ್ದು ಮಲಗಿಸಿದಳು. ಆ ಕೋಣೆಯೊಳಗಿನ ದೈನ್ಯಾವಸ್ಥೆಯನ್ನು ಕಂಡು ಅವರಿಬ್ಬರಿಗೆ ಕಡು ವಿಷಾದವೆನಿಸಿತು. ನರ್ಸಳು ಕೋಣೆಯ ಮುಂಭಾಗದ ಬಾಗಿಲವನ್ನು ಇಕ್ಕಿ, ಹಿಮ್ಮಗ್ಗಲಿನ ಕೋಣೆಯ ಬಾಗಿಲವನ್ನೂ ಕಿಡಕಿಗಳನ್ನೂ

ತೆರದಿಟ್ಟಳು. ಆ ಮೇಲೆ ಅವರು ಕೃಷ್ಣೆಯ ಪ್ರಕೃತಿಯನ್ನು ಪರೀಕ್ಷಿಸಿದರು. ನಡುನಡುವೆ ನರ್ಸಳು ಭಾಗೀರಥಿಬಾಯಿಗೆ ಏನೋ ಪ್ರಶ್ನೆಗಳನ್ನು ಕೇಳುತ್ತಿದ್ದಳು. ಕೆಲಹೊತ್ತಿನ ಮೇಲೆ ಅವಳು ಮತ್ತೆ ಹೊರಬಾಗಿಲವನ್ನು ತೆರೆದಳು. ಭಾಗೀರಥೀದೇವಿಯು ಸಾವಿತ್ರಿಯನ್ನು ಕರೆದಿದಳು. ಅವಳು ಬಂದ ಕೂಡಲೆ ನರ್ಸಳು "ಬಾಳಾ, ನನಗೆ ಹಿಂದಿಷ್ಟು ಬಿಸಿ ನೀರು ಬೇಕಾಗಿವೆ ನಿಮ್ಮ ಮನೆಯಲ್ಲಿ 'ಸ್ಟೋವ್' ಇರುವದೇ?"

"ಇಲ್ಲ."

"ಹಾಗಾದರೆ ನೀನು ಇಲ್ಲಿ ನೀರು ಕಾಸಿದರೆ ಹೊಗೆಯಾಗುವದು. ನೆರೆಯವರಲ್ಲಾದರೂ ಅದು ಸಿಕ್ಕಿತೇನು?"

"ಹೂ, ಸಿಗುವದು. ನಾನು ಈಗಲೇ ತರುತ್ತೇನೆ."

"ಹಾಗಾದರೆ ಹಿಂದಿಷ್ಟು ಚಹವನ್ನಾದರೂ ಮಾಡಿಕೊಡುವಿಯಾ?"

"ಓಹೋ! ಮಾಡಿಕೊಡುವೆನು" ಎಂದು ಸಾವಿತ್ರಿಯು ಉಲ್ಲಾಸದಿಂದ ಉತ್ತರ ಕೊಟ್ಟಳು.

ಕೂಡಲೆ ಸಾವಿತ್ರಿಯು ದುರ್ಗಾಬಾಯಿಯ ಮನೆಗೆ ಹೋಗಿ ನೀರು ಕಾಸಿ ತಂದದ್ದಲ್ಲದೆ ಚಹಾ ಮಾಡಿಕೊಂಡು ಬಂದಳು. ನರ್ಸಳು ತನಗೆ ಮತ್ತೆ ಬೇಕಾದ ಸಾಮಾನುಗಳನ್ನೂ ಬೇಡಿ ಇಸಗೊಂಡು ಬಾಗಿಲವನ್ನು ಇಕ್ಕಿಕೊಂಡಳು. ಸದಾಶಿವನು ಪಡಸಾಲೆಯಲ್ಲಿ ಕಂಬಕ್ಕೆ ಆತುಕೊಂಡು ನಿಂತಿದ್ದನು. ಅವನ ಮನಸ್ಸಿನಲ್ಲಿ ಆ ಇಡೀ ದಿವಸದಲ್ಲಿ ಸಂಭವಿಸಿದ ಸಂಗತಿಗಳ ವಿಷಯಕ್ಕೆ ವಿಚಾರವು ನಡೆದಿತ್ತು. ಬೋಟಿನಲ್ಲಿ ತನ್ನ ಪ್ರಿಯ ಭಗಿನಿಗಾದ ಸ್ಥಿತಿ, ಅಲ್ಲಿ ಅವಳಿಗೆ ಹಿಬ್ಬ ಹೆಂಗಸಿನಿಂದಾದ ಅಪಮಾನ, ಗಾಡಿಯವನ ಔದಾರ್ಯ, ಮನೆಗೆ ಬಂದ ಕೂಡಲೆ ಅಕ್ಕನಿಗೆ ಮೂರ್ಛೆ ಬಂದದ್ದು,

ಡಾಕ್ಟರರ ದೆಸೆಯಿಂದ ತಾನು ಮಾಡಿದ ಪ್ರಯತ್ನಗಳು, ಡಾಕ್ಟರ ರಾಜೆಯವರ ವರ್ತನೆ ಇವೇ ಮೊದಲಾದ ವಿಚಾರಗಳು ಅವನ ಮನಸ್ಸಿನಲ್ಲಿ ಒಂದರ ಮೇಲೊಂದು ಬರತೊಡಗಿದ್ದವು. ಕಡೆಯ ವಿಚಾರವು ಅವನ ಮನಸ್ಸಿಗೆ ಹೊಳೆದ ಕೂಡಲೆ, ಅವನ ಮುಖ ಚರ್ಯೆಯೇ ಬದಲಾಯಿತು ಅವನು ಬಿಸಿಬಿಸಿಯಾದ ಉಸುರು ಬಿಡಹತ್ತಿದನು; ಮತ್ತು ಕರಕರನೆ ಹಲ್ಲು ಕಡಿದು ಔಡುಗಳನ್ನು ಕಚ್ಚಿ. ಕಣ್ಣುಗಳನ್ನು ಕೆರಳಿಸಿ ಅತ್ತಿತ್ತ ನೋಡಹತ್ತಿದ್ದನು ಈ ಮೇರೆಗೆ ಒಂದು ತಾಸಿನ ವರೆಗೆ ಅವನು ಅದೇ ವಿಚಾರದಲ್ಲಿ ತೊಡಗಿದ್ದನು. ಇಷ್ಟರಲ್ಲಿಯೇ ಅವನ ಮನೆಯ ಮುಂದಿನ ಬೀದಿಯಲ್ಲಿಯ ಕಂದೀಲು ಚಕ್ಕನೆ ಹತ್ತಿತು; ಮತ್ತು ಸುತ್ತಲೂ ಅದರ ಬೆಳಕು ಬಿದ್ದಿತು. ಕೂಡಲೆ ಸದಾಶಿವನ ಲಕ್ಷ್ಯವು ಅತ್ತ ಕಡೆಗೆ ಹೋಯಿತು; ಮತ್ತು ಅದೇ ಕ್ಷಣಕ್ಕೆ ಅವನ ಎಲ್ಲ ವಿಚಾರಗಳಲ್ಲಿ ಕ್ರಾಂತಿಯನ್ನುಂಟು ಮಾಡುವ, ಕೋಣೆಯಲ್ಲಿ ಆದೇ ಹುಟ್ಟಿದ ಅವನ ಪುಟ್ಟ ಸೋದರಳಿಯನು ಅಳುವ ಧ್ವನಿಯು ಅವನ ಕಿವಿಗೆ ಬಿತ್ತು

ಇಷ್ಟರಲ್ಲಿಯೇ ಸಾವಿತ್ರಿಯು ಹೊರಗೆ ಓಡುತ್ತ ಬಂದು "ಅಕ್ಕನಿಗೆ ಕೂಸು ಹುಟ್ಟಿತು'' ಎಂದು ಆನಂದದಿಂದ ಒದರಿ ಹೇಳಿದಳು. ಅವಳು ಇಷ್ಟೊತ್ತಿನ ವರೆಗೆ ಕೋಣೆಯ ಹೊರಬಾಗಿಲಿಗೇ ನಿಂತಿದ್ದು ಅವಳ ಲಕ್ಷ್ಯವೆಲ್ಲ ಅದರ ಒಳಮಗ್ಗಲಿಗೇ ಇತ್ತು; ಅದರಿ ಕೂಸು ಅಳುವ ಧ್ವನಿಯು ಕಿವಿಗೆ ಬಿದ್ದ ಕೂಡಲೆ ಅವಳಿಗೆ ಪರಮಾನಂದವುಂಟಾಗಿ ಅವಳು ಈ ಸಂತೋಷದ ಸುದ್ದಿಯನ್ನು ತನ್ನ ಪ್ರಿಯ ಅಣ್ಣನಿಗೆ ಹೇಳಲಿಕ್ಕೆ ಅವನ ಬಳಿಗೆ ಓಡಿ ಬಂದಳು; ಮತ್ತು 'ಅಣ್ಣಾ, ಅಕ್ಕನು ಬಾಣಂತಿಯಾದಳು' ಎಂದು ಹೇಳುವಷ್ಟರಲ್ಲಿಯೇ ಎದುರಿಗಿನ ಮನೆಯೊಳಗಿಂದ ದುರ್ಗಾಬಾಯಿಯೂ ಹೊರಗೆ

ಬಂದಳು. ಆಗ ಸಾವಿತ್ರಿಯು ಅವಳ ಕಡೆಗೆ ತಿರುಗಿ 'ದುರ್ಗಾ ಬಾಯಿಯವರೇ, ನಮ್ಮ ಅಕ್ಕನು ಬಾಣಂತಿಯಾದಳು' ಎಂದು ಹೇಳಿದಳು.

"ಹೌದು, ಸಾವಿತ್ರೀ, ನನಗಾದರೂ ಕೂಸಿನ ಧ್ವನಿಯು ಕೇಳಿಸಿದ್ದರಿಂದ ನಾನೂ ಮನೆಗೆಲಸವನ್ನು ಅಷ್ಟಕ್ಕೇ ಬಿಟ್ಟು ಹೊರಗೆ ಬಂದೆನು. ಪಾಪ! ಕೃಷ್ಣೆಯು ಸುರಕ್ಷಿತವಾಗಿ ಈ ಕುತ್ತಿನೊಳಗಿಂದ ಪಾರಾದದ್ದು ದೊಡ್ಡ ಭಾಗ್ಯವೇ ಸರಿ! ನಡೆ, ಒಳಗೆ ಹೋಗೋಣ ಎಂಥ ಕಠಿಣ ಪ್ರಸಂಗ ಬಂದರೂ ದೇವರಿಗೆ ದಯವಿಲ್ಲವೇ? ಅವನ ದಯದಿಂದ ನಿಮ್ಮ ಅಕ್ಕನು ಪಾರಾದಳೆಂಬದು ನಿಮ್ಮ ಪೂರ್ವಜರ ಪುಣ್ಯವೇ ಸರಿ!"

---

## ೮ನೆಯ ಪ್ರಕರಣ.

# ದೈವವೂ ದೇವರೂ.

ತನ್ನ ಸೋದರಳಿಯನ ಅಳುವ ಧ್ವನಿಯನ್ನು ಕೇಳಿ ಸದಾಶಿವನ ವಿಚಾರದಲ್ಲಿ ಕ್ರಾಂತಿಯುಂಟಾದದ್ದರಲ್ಲಿ ಆಶ್ಚರ್ಯವಿಲ್ಲ ಇಷ್ಟೊತ್ತಿನ ವರೆಗೆ ದುಃಖದಿಂದ ಹುಚ್ಚಾದ ಅವನ ಮನಸ್ಸು ಈಗ ಆನಂದದಿಂದ ತುಂಬಿ ತುಳುಕಹತ್ತಿತು. ಸ್ವಲ್ಪ ಹೊತ್ತಿನ ವರೆಗೆ ಅವನು ಆ ಆನಂದವನ್ನು ಅನುಭವಿಸುತ್ತ ನಿಂತನು. ಆ ಮೇಲೆ ಅವನು ಶ್ರೀಪತರಾಯರಿಗೆ ಈ ಸಂಗತಿಯ ವಿಷಯವಾಗಿ ಹೇಗೆ-ಹೇಗೆ ಪತ್ರ ಬರೆಯಬೇಕೆಂದು ವಿಚಾರ ಮಾಡಲಾರಂಭಿಸಿದನು. ಇಷ್ಟರಲ್ಲಿ ಮೂರನೆಯದೊಂದು ವಿಚಾರವು ಅವನ ಮನಸ್ಸಿನಲ್ಲಿ ತಲೆ

ದೋರಹತ್ತಿತು. ಇಷ್ಟೊತ್ತಿನ ತನಕ ದುಃಖಸಂತಪ್ತವಾದ ಅವನ ಮನಸ್ಸಿಗೆ ಆನಂದದ ತುಷಾರಗಳಿಂದ ಶಾಂತತೆಯುಂಟಾಗಲು, ಚಿಂತೆಯು ಆ ಶಾಂತತೆಯನ್ನು ಬದಿಗೊತ್ತಿ ತನ್ನ ಪ್ರತಾಪವನ್ನು ತೋರಿಸಹತ್ತಿತು ಅವನಿಗೆ ಹಿಮ್ಮಿಂದೊಮ್ಮೆ ಹಿಂದು ದೊಡ್ಡ ವಿಚಾರವು ಬಂತು. ತನ್ನ ಸಂಗಡ ಬಂದ ದೊಡ್ಡ ಡಾಕ್ಟರರ ಫೀ, ನರ್ಸಳ ಫೀ ಮತ್ತು ಮೋಟಾರ ಗಾಡಿಯ ಬಾಡಿಗೆಯ ದೆಶೆಯಿಂದ ಖರ್ಚಿನ ವ್ಯವಸ್ಥೆಯನ್ನು ಯಾವ ಬಗೆಯಿಂದ ಮಾಡಬೇಕೆಂಬ ದೊಡ್ಡ ಪ್ರಶ್ನೆಯು ಅವನ ಮುಂದೆ ಬಂದು ನಿಂತಿತು. ಡಾಕ್ಟರ ಸಾಹೇಬರ ಫೀ ಏನಿಲ್ಲೆಂದರೂ ೧೫ ರೂಪಾಯಿ, ನರ್ಸಳ ಫೀ ಹತ್ತು ರೂಪಾಯಿ, ಮೋಟಾರದ ಬಾಡಿಗೆ ೫ ರೂಪಾಯಿ, ಹೀಗೆ ಹಿಟ್ಟು ಮೂವತ್ತು ರೂಪಾಯಿಗಳು ಬೇಕಾಗಿದ್ದವು; ಮತ್ತು ಅವನ ಕಿಸೆಯಲ್ಲಿ ಈಗ ಹಿಟ್ಟು ಏಳೇ ರೂಪಾಯಿಗಳಿದ್ದವು ಶೀಪಾದರಾಯರು ಅವನಿಗೆ ಬರುವ ಮುಂದೆ ಎಂಟು ರೂಪಾಯಿಗಳನ್ನು ಕೊಟ್ಟಿದ್ದರು ಅವುಗಳಲ್ಲಿ ಹಿಂದು ರೂಪಾಯಿಯನ್ನು ವ್ಹಿಕ್ಟೋರಿಯಾದ ಬಾಡಿಗೆಗೆ ಕೊಟ್ಟಿದ್ದನು. ಇನ್ನು ಬೇಕಾದ ರೂಪಾಯಿಗಳನ್ನು ಹೇಗೆ ಕೂಡಿಸಬೇಕೆಂಬ ಚಿಂತೆಯು ಅವನನ್ನು ಬಾಧಿಸತೊಡಗಿತು

ಎಷ್ಟೋ ಹೊತ್ತಿನ ವರೆಗೆ ವಿಚಾರ ಮಾಡಿ, ಅವನು ನೇರಿ ಮನೆಗೆ ಹೋದನು. ವಾಮನರಾಯರು ಅದೇ ಸಂಜೆಯ ಊಟ ತೀರಿಸಿಕೊಂಡು ಕುಳಿತಿದ್ದರು. ಸದಾಶಿವನು ಹೊಳಗೆ ಬಂದದ್ದನ್ನು ಕಂಡು ಅವರು: 'ಏನಪ್ಪಾ ಸದಾಶಿವಾ, ನಿಮ್ಮ ಅಕ್ಕನು ಬಾಣಂತಿಯಾದಳೇ? ನನಗೆ ಇದೇ ಈಗ ಕೂಸಿನ ಧ್ವನಿಯು ಕೇಳಿಸಿತು. ಸೋದರಳಿಯನೋ, ಸೋದರಸೊಸೆಯೋ?

"ನನಗೆ ಅದಿನ್ನೂ ಗೊತ್ತಾಗಿಲ್ಲ! ಯಾಕೆಂದರೆ ಕೋಣೆಯ

ಬಾಗಿಲವು ಇನ್ನೂವರೆಗೆ ತೆರೆದಿಲ್ಲ'' ಹೀಗೆಂದು ಸದಾಶಿವನು ಕೆಲಹೊತ್ತಿನ ವರೆಗೆ ಸುಮ್ಮನೆ ಕುಳಿತನು. ಆ ಮೇಲೆ ಅವರ ಹತ್ತಿರ ಹೋಗಿ ''ವಾಮನರಾಯರೇ, ನನಗೆ ಕೆಲವು ರೂಪಾಯಿಗಳನ್ನು ಕೈಗಡ ಕೊಡುವಿರೇನು? ಶ್ರೀಪಾದರಾಯರ ಕಡೆಯಿಂದ ರೂಪಾಯಿಗಳು ಬಂದ ಕೂಡಲೆ ನಿಮ್ಮ ಹಣವನ್ನು ತಿರುಗಿ ಕೊಡುವೆನು. ಡಾಕ್ಟರ ಮತ್ತು ನರ್ಸಳ ಫೀ ಮತ್ತು ಮೋಟಾರದ ಬಾಡಿಗೆಯನ್ನು ಕೊಡಬೇಕಾಗಿದೆ'' ಎಂದನು. ಸದಾಶಿವಾ, ನನ್ನ ಹತ್ತಿರ ಇಲ್ಲನಪ್ಪಾ! ತಿಂಗಳು ಮುಗಿಯುತ್ತ ಬಂತು. ಅಂದಮೇಲೆ ನನ್ನ ಹತ್ತಿರ ರೂಪಾಯಿಗಳು ಹೇಗೆ ಉಳಿಯುವವು? ಒಂದೂ ಕಾಲು ರೂಪಾಯಿ ಮಾತ್ರ ಉಳಿದಿರುವದು; ಕೊಡಲ್ಯಾ?''

''ಇಷ್ಟರಿಂದ ಏನಾದೀತು? ನನಗೆ ಏನಿಲ್ಲೆಂದರೂ ಇಪ್ಪತ್ತೈದು ರೂಪಾಯಿಗಳು ಬೇಕು''

''ನನ್ನ ಹತ್ತಿರ ಇಷ್ಟು ಎಲ್ಲಿಂದ ಬಂದಾವು? ಮತ್ತು ಇಷ್ಟೊಂದು ಹಣವನ್ನು ಕೊಡುವವರಾದರೂ ಯಾರು? ಮಾರವಾಡಿಯ ಕಡೆಗೆ ಹೋದರೆ ಅವನಂತೂ ಏನಾದರೂ ಸಾಮಾನನ್ನು ಒತ್ತೀ ಇಟ್ಟ ಹೊರತು ಕೊಡಲಾರನು!'' ಎಂದು ದುಃಖಿತ ಸ್ವರದಿಂದ ಅಂದರು.

ಸದಾಶಿವನು ಮತ್ತೆ ಅತಿ ಚಿಂತಾಗ್ರಸ್ತನಾದನು. ಅವನು ತನ್ನ ನೆರೆಹೊರೆಯವರ ಮನೆಗೆ ಹೋಗಿ, ಕೈಗಡಗವನ್ನು ಕೇಳಿ ನೋಡಿದನು. ಆದರೆ ಪಾಪ! ಎಲ್ಲರೂ ಒಂದೇ ಮಾಲೆಯೊಳಗಿನ ಮಣಿಗಳೇ. ಮುಂಜಾವಿನ ಹೊಟ್ಟೆ ಸಾಗಿದ ಬಳಿಕ ಅವರಿಗೆ ಸಂಜೆಯ ಊಟದ ಚಿಂತೆ! ಇಂಥ ನೆರೆಹೊರೆಯವರಿಂದ ಸದಾಶಿವನಿಗೆ ಇಪ್ಪತ್ತೈದು ರೂಪಾಯಿಗಳು ಸಿಗುವದಂತೂ ಒತ್ತಟ್ಟಿಗಿರಲಿ; ಇಪ್ಪತ್ತೈದು ಆಣೆಗಳಾದರೂ ಸಿಗುವ ಬಗೆ ಹೇಗೆ? ಕಡೆಗೆ ಸದಾಶಿವನು

ಮತ್ತೆ ವಾಮನರಾಯರ ಬಳಿಗೆ ಹೋಗಿ, 'ರಾಯರೇ, ನಾನು ಏನು ಮಾಡಲಿ? ನನ್ನ ಹತ್ತಿರ ಒಟ್ಟಿಗೆ ಏಳು ರೂಪಾಯಿಗಳಿರುವವು. ಡಾಕ್ಟರರಿಗೂ, ನರ್ಸಳಿಗೂ ಫೀ ಕೊಡಲೇ ಬೇಕಾಗುವದು. ವಾಮನರಾಯರೇ, ಈ ನನ್ನ ಜರದ ಟೊಪ್ಪಿಗೆಯನ್ನು ಮಾರ್ವಾಡಿಯ ಕಡೆಗೆ ಒತ್ತೀ ಇಟ್ಟರೆ ಎಷ್ಟು ರೂಪಾಯಿಗಳು ಬಂದಾವು?''

''ಎಲೋ, ಈ ಟೊಪ್ಪಿಗೆಗೆ ಎಷ್ಟು ಬಂದೀತು? ಬಹಳ ವಾದರೆ ಎರಡು ರೂಪಾಯಿ.''

''ಹಾಗಾದರೆ ಇನ್ನೇನು ಮಾಡಬೇಕು?'' ಎಂದು ಸದಾಶಿವನು ಬಹಳ ಸಂಕಟದಲ್ಲಿ ಬಿದ್ದನು. ಅವನಿಗೆ ಏನೂ ತಿಳಿಯದಾಯಿತು. ಕ್ಷಣಹೊತ್ತಿನ ಮೇಲೆ ಅವನು:''ನಾನು ಮಾಸ್ತರರ ಮನೆಗೆ ಹೋಗಿ ಕೇಳಬೇಕೆಂದಿದ್ದೆನು; ಆದರೆ ಅವರ ಹತ್ತರವಾದರೂ ಇಷ್ಟೊಂದು ರೂಪಾಯಿಗಳು ಎಲ್ಲಿಂದ ಬಂದಾವು! ಆದರೆ ರಾಯರೇ, ಈ ನನ್ನ ಜರದ ಟೊಪ್ಪಿಗೆ ಮತ್ತು ಅವ್ವನದೊಂದು ಬಹು ದಿವಸದ ಸೀರೆ ಇವೆರಡನ್ನೂ ಒತ್ತೀ ಇಟ್ಟರೆ ಮಾರವಾಡಿಯು ರೂಪಾಯಿಗಳನ್ನು ಕೊಡಲಿಕ್ಕಿಲ್ಲವೇ?''

''ಒಳ್ಳೇದು, ತಕ್ಕೊಂಡು ಬಾ! ಆದಷ್ಟು ಪ್ರಯತ್ನ ಮಾಡಿ ನೋಡೋಣ!''

ಸದಾಶಿವನು ತನ್ನ ಕೋಣೆಯ ಕಡೆಗೆ ಹೋದನು. ಕೋಣೆಯ ಬಾಗಿಲವು ಇನ್ನೂ ಇಕ್ಕಿತ್ತು. ಸಾವಿತ್ರಿಯು ಅಲ್ಲಿಯೇ ಬಾಗಿಲದ ಹತ್ತರ ನಿಂತಿದ್ದಳು. ನಡುವೆ ಒಮ್ಮೆ ನರ್ಸಳು ಮೆಲ್ಲಗೆ ಬಾಗಿಲ ತೆರೆದು ದೀವಿಗೆಯನ್ನು ಬೇಡಿದ್ದಳು.

''ಸಾವಿತ್ರೀ, ಬಾಗಿಲವನ್ನು ಇನ್ನೂವರೆಗೆ ತೆರೆದಿಲ್ಲವೇ?''

''ಅಣ್ಣಾ, ಇನ್ನೂ ಇಲ್ಲ ಆಗಲೇ ಮಾತ್ರ ಮಡಮ್ಮನು ದೀವಿಗೆಯನ್ನು ಬೇಡಿ ಇಸಕೊಂಡಳು ನಾನು ನೆರೆಮನೆಯ

ದುರ್ಗಾಬಾಯಿಯವರ ದೀವಿಗೆಯನ್ನು ತಂದು ಕೊಟ್ಟೆನು ಏಕೆ? ಅಣ್ಣಾ ನಿನಗೆ ಒಳಗೆ ಹೋಗಬೇಕಾಗಿದೆಯೇನು?"

"ಹೌದು, ನನಗೆ ಒಳಗೆ ಸ್ವಲ್ಪ ಕೆಲಸವಿದೆ. ನನಗೆ ಪೆಟ್ಟಿಗೆಯನ್ನು ತೆರೆಯಬೇಕಾಗಿದೆ; ಆದರೆ ಈಗ ಏನು ಮಾಡಬೇಕು? ಸಾವಿತ್ರೀ, ಅವ್ವನನ್ನು ಮೆಲ್ಲಗೆ ಒದರಿ ಕರೆಯುವಿಯಾ?"

ಸಾವಿತ್ರಿಯು ಅದರಂತೆ ಮೂರು-ನಾಲ್ಕು ಸಾರೆ ತಮ್ಮ ತಾಯಿಯನ್ನು ಮೆಲ್ಲಗೆ ಒದರಿದಳು 'ಸ್ವಲ್ಪ ತಡೆಯಿರಿ' ಎಂದು ಒಳಗಿನಿಂದ ಯಾರೋ ಅಂದರು; ಮತ್ತು ಸ್ವಲ್ಪ ಹೊತ್ತಿನ ಮೇಲೆ ಸ್ವತಃ ಡಾಕ್ಟರ ಸಾಹೇಬರೇ ಬಾಗಿಲವನ್ನು ತೆರೆದರು. ಅವರು ತಮ್ಮ ಕೈಯನ್ನು ಸ್ವಚ್ಛವಾದ ಟಾವೆಲಿನಿಂದ ಒರಿಸಿಕೊಳ್ಳುತ್ತ 'ನಿಮ್ಮ ಅಕ್ಕನು ಸುರಕ್ಷಿತವಾಗಿ ಪ್ರಸೂತಳಾದಳು ಗಂಡುಕೂಸು ಹುಟ್ಟಿದೆ. ತಾಯಿಯೂ ಮಗನೂ ಸುಖರೂಪದಿಂದಿರುವರು' ಎಂದು ಹೇಳಿದರು.

ಇದರಿಂದ ಸದಾಶಿವನಿಗೆ ಅತ್ಯಾನಂದವುಂಟಾಗಿ ಉತ್ತರ ಕೊಡಲಿಕ್ಕೆ ಬಾಯಿಯೇ ಬರಲೊಲ್ಲದು. ಡಾಕ್ಟರಸಾಹೇಬರಿಗೆ ಕೃತಜ್ಞತೆಯನ್ನು ಯಾವ ಬಗೆಯಿಂದ ವ್ಯಕ್ತಮಾಡಬೇಕೆಂಬದು ಅವನಿಗೆ ತಿಳಿಯದಾಯಿತು ಕೃತಜ್ಞತೆಯಿಂದ ಅವನ ಕುತ್ತಿಗೆಯ ಶಿರಗಳು ಉಬ್ಬಿ ಬಂದವು ಆದರೂ ಅವನ ಕೈಗಳೆರಡೂ ಅವನ ಕೃತಜ್ಞತೆಯನ್ನು ವ್ಯಕ್ತಗೊಳಿಸಿದವು! ಡಾಕ್ಟರಸಾಹೇಬರಿಗೆ ಅವನ ಮನಸ್ಸಿನ ಸ್ಥಿತಿಯು ಗೊತ್ತಾಯಿತು. ಅವರು ಪ್ರೇಮದಿಂದ ಅವನ ಹೆಗಲಮೇಲೆ ಕೈಯನ್ನಿಟ್ಟು:"ನೀನು ಅಕ್ಕನನ್ನು ಯಾವಾಗ ನೋಡೇನೆಂದು ಲವಲವಿಕೆಯುಳ್ಳವನಾಗಿರಬಹುದಲ್ಲವೇ? ನಡೆ, ಒಳಗೆ. ನಿನಗೆ ನಿನ್ನ ಸೋದರಳಿಯನನ್ನು ತೋರಿಸುತ್ತೇನೆ" ಹೀಗೆಂದು ಡಾಕ್ಟರಸಾಹೇಬರು ಕೋಣೆಯೊಳಗೆ ಹೋದರು.

ಅವರ ಹಿಂದಿನಿಂದ ಸದಾಶಿವನೂ, ಸಾವಿತ್ರಿಯೂ ಸಾವಕಾಶವಾಗಿ ಹೋದರು; ಅದರ ಕೋಣೆಯಲ್ಲಿ ಅವರಿಗೆ ಕಾಣಿಸಿದ್ದೇನು? ಒಂದು ಮೂಲೆಯಲ್ಲಿ ಅವರ ಅಕ್ಕನು ನಿದ್ರೆಹತ್ತಿ ಮಲಗಿದ್ದು, ನರ್ಸಳು ಅವಳ ಹೊಟ್ಟೆಗೆ ಏನೋ ಹಚ್ಚಿ ತಿಕ್ಕುತ್ತ ಕುಳಿತಿದ್ದಳು. ಅಲ್ಲಿಯೇ ಹತ್ತಿರದಲ್ಲಿ ಸ್ವಚ್ಛವಾದ ಬಿಳೇ ಅರಿವೆಯಲ್ಲಿ ಸುತ್ತಲ್ಪಟ್ಟ ಮುದ್ದು ಮಗುವು ಸ್ವಸ್ಥವಾಗಿ ನಿದ್ರೆ ಮಾಡುತ್ತಿತ್ತು. ಅದರಾಚೆಯಲ್ಲಿ ನರ್ಸಳು ತನ್ನ 'ಬ್ಯಾಗ್'ದ ಬಾಯಿತೆರೆದು ಇಟ್ಟದ್ದು, ಕೆಲವು ಸಣ್ಣ ದೊಡ್ಡ ಔಷಧದ ಶೀಶೆಗಳಿದ್ದವು; ಮತ್ತು ಅಲ್ಲಿಯೇ ನೆಲದಮೇಲೆ ಹಾಸಿದ ಬಿಳೇ ಟಾವೆಲ್ಲಿನ ಮೇಲೆ ಒಂದು ಕತ್ತರಿಯೂ, ಕೆಲವು ಹದನಾದ ಶಸ್ತ್ರಗಳೂ, ಚಕಚಕಿಸುವ ಸಣ್ಣ-ಸಣ್ಣ ಕೊಳವೆಗಳೂ ಇದ್ದವು ಮತ್ತೊಂದು ಕಡೆಯಲ್ಲಿ ನರ್ಸಳು ತನ್ನ ಸಂಗಡ ತಂದ ಬೆಣ್ಣೆಯ ಮುದ್ದೆಯಂತೆ ಕಾಣುವ ಮೃದುವಾದ ಅರಳೆಯನ್ನೂ, ಕೆಲವು ಉಣ್ಣೆಯ ಅರಿವೆಯ ತುಂಡುಗಳನ್ನೂ ಇಟ್ಟದ್ದಳು. ಅಲ್ಲಿಯೇ ಹತ್ತಿರವೇ ಒಂದು ಸಣ್ಣ ಸ್ಪಿರಿಟ್‌ದ ದೀವಿಗೆಯು ಉರಿಯುತ್ತಿತ್ತು.

ಅವರಿಬ್ಬರೂ ಒಳಗೆ ಬಂದ ಕೂಡಲೆ ನರ್ಸಳು ಸಾವಿತ್ರಿಯ ಕಡೆಗೆ ನೋಡಿ: "ಹುಡಿಗೀ, ಕೂಸು ನೋಡಲಿಕ್ಕೆ ಬಂದೆಯೇನು? ಹತ್ತಿರ ಬಾ. ನೋಡು, ಕೂಸು ಎಷ್ಟು ಸುಂದರವಿದೆ" ಹೀಗೆಂದು ಅವಳು ಆ ಕೂಸಿನ ಮೋರೆಯ ಮೇಲೆ ಹೊಚ್ಚಿದ ವಸ್ತ್ರವನ್ನು ಬದಿಗೆ ಸರಿಸಿದಳು; ಮತ್ತು ತಾನಾದರೂ ಅರಗಳಿಗೆಯ ವರೆಗೆ ಅದರ ಮುಖದ ಕಡೆಗೆ ನೋಡಿ, ನಿಜವಾಗಿಯೂ ಇದು ಒಂದು ಸುಂದರವಾದ ಮತ್ತು ನಿರೋಗಿಯಾದ ಕೂಸು ಇರುವದು, ಎಂದು ಅಂದಳು.

ಈ ಶಬ್ದಗಳನ್ನು ಉಚ್ಚರಿಸುವಾಗ್ಗೆ ಕೃಷ್ಣೆಗೂ ಎಚ್ಚರಿಕೆಯಾಗಿತ್ತು. ನರ್ಸಳ ಬಾಯಿಂದ ಈ ಮಂಜುಳವಾದ ಶಬ್ದಗಳನ್ನು ಕೇಳಿ

ಅವಳಿಗಾದ ಆನಂದವನ್ನು ಒಣ್ಣಿಸಲಳವಲ್ಲ! ಇದೊಂದು ವಾಕ್ಯ ದಿಂದಲೇ ಅವಳ ಎಲ್ಲ ವೇದನೆಗಳೂ, ದುಃಖವೂ ಮತ್ತು ಚಿಂತೆಯೂ ಮಾಯವಾದವು. ಅವಳ ಮುಖಕ್ಕೆ ಮತ್ತೆ ಕಳೆಯೇರಿತು. ಕೂಸು ಹುಟ್ಟಿದ ಮೇಲೆ ಅವಳು ಹಲವು ಸಾರೆ ಅದರ ಕಡೆಗೆ ನೋಡಿ ದ್ದಳು; ಆದರೆ ನರ್ಸಳ ಬಾಯಿಂದ ಹೊರಟ ಶಬ್ದಗಳನ್ನು ಕೇಳಿ ಅವಳ ಆನಂದಕ್ಕೆ ಮೇರೆಯೇ ಉಳಿಯಲಿಲ್ಲ. ತನ್ನ ಕೂಸಿಗೆ ಅನ್ಯರು 'ಚನ್ನಾಗಿದೆ' ಎಂಬದನ್ನು ಕೇಳುವದರಿಂದಲೇ ತಾಯಿಗೆ ಕಡು ಹರ್ಷವೂ, ಸಮಾಧಾನವೂ ಉಂಟಾಗುವದೆಂಬ ಮಾತು ಸಟೆ ಯಲ್ಲ. ಇರಲಿ. ಸಾವಿತ್ರಿಯು ಕೂಸಿನ ಕಡೆಗೆ ನೋಡಿದ ಮೇಲೆ ತನ್ನ ಅಕ್ಕನ ಕಡೆಗೆ ಅವಳ ದೃಷ್ಟಿಯು ಹೋಯಿತು. ಆ ಮೇಲೆ ಅವಳು ಅದರಾಚೆಯಲ್ಲಿ ಹೊರಸಿನ ಮೇಲೆ ಮಲಗಿದ ತನ್ನ ತಾಯಿ ಯ ಕಡೆಗೆ ಹೊರಳಿ ನೋಡಿದಳು. ಭಾಗೀರಥಿದೇವಿಯಾದರೂ ತನ್ನ ಹೊರಸಿನ ಮೇಲೆ ಬಿದ್ದುಕೊಂಡೇ ಎಲ್ಲ ಪ್ರಕಾರವನ್ನು ನೋಡು ತ್ತಿದ್ದಳು ತನಗೆ ಹುಡುಗೆಯ ಬಾಣಂತಿತನದಲ್ಲಿ ಏನೂ ದುಡಿಯು ವದಾಗುವದಿಲ್ಲವೆಂದು ಅವಳು ಬಹಳ ಖಿನ್ನಮನಸ್ಕಳಾಗಿದ್ದಳು; ಆದರೂ ಇಷ್ಟೊತ್ತಿನ ವರೆಗೆ ಡಾಕ್ಟರಸಾಹೇಬರೂ, ನರ್ಸಳೂ ತನ್ನ ಮಗಳ ವಿಷಯವಾಗಿ ಮಾಡಿದ ಧಾವತಿಯನ್ನು ನೆನೆದು, ತನ್ನ ಸಂಕಟ ಸಮಯದಲ್ಲಿ ಸಹಾಯಮಾಡಲಿಕ್ಕೆ ಬಂದ ದೇವತೆ ಗಳೇ ಇವರಿರಬಹುದೆಂದು ಅವಳಿಗೆ ಅನಿಸುತ್ತಿತ್ತು.

ಸದಾಶಿವನು ಕೋಣೆಯೊಳಗೆ ಹೋಗಿ ಮತ್ತೊಮ್ಮೆ ಕೂಸಿನ ಮೋರೆಯನ್ನು ನೋಡಿದನು; ಮತ್ತು ಆ ಮೇಲೆ ಮೆಲ್ಲಗೆ ಹೊರ ಸಿನ ಬಳಿಗೆ ಹೋಗಿ, ಅದರ ಬುಡದಲ್ಲಿದ್ದ ಪೆಟ್ಟಿಗೆಯನ್ನು ಸಾವ ಕಾಶವಾಗಿ ಹೊರಗೆ ಜಗ್ಗಿದನು. ಭಾಗೀರಥಿದೇವಿಯು ಅವನಿಗೆ ಏನೋ ಪ್ರಶ್ನೆ ಕೇಳಬೇಕೆಂದಿದ್ದಳು; ಆದರೆ ಹತ್ತರ ಡಾ. ಸಾಹೇ

ಬರು ನಿಂತದ್ದರಿಂದ ಅವಳು ಮಾತನಾಡದೆ ಸುಮ್ಮನಿದ್ದಳು. ಸದಾ ಶಿವನು ತನಗೆ ಬೇಕಾದ ಸಾಮಾನವನ್ನು ಪೆಟ್ಟಿಗೆಯೊಳಗಿಂದ ಹೊರ ತೆಗೆದು, ಅದನ್ನು ಸುತ್ತಿ ಬಗಲಲ್ಲಿಟ್ಟುಕೊಂಡು ಮೇಲಕ್ಕೆದ್ದನು; ಮತ್ತು "ಅವ್ವಾ, ಸ್ವಲ್ಪ ಹೊರಗೆ ಹೋಗಿಬರುತ್ತೇನೆ" ಎಂದು ಹೇಳಿ ಹೊರಟು ಹೋದನು

ಸ್ವಲ್ಪ ಹೊತ್ತಿನ ಮೇಲೆ ಡಾ. ಸಾಹೇಬರು ಭಾಗೀರಥಿ ದೇವಿಗೆ:—"ಅವ್ವಾ, ನಿಮಗೆ ಏನಾಗುತ್ತದೆ; ಹೇಳಿರಿ ನೋಡೋಣ. ನಿಮ್ಮ ಕೈಯನ್ನು ತೋರಿಸಿರಿ" ಎಂದು ಅಂದರು.

ಆ ಮೇಲೆ ಅವರು ಅವಳನ್ನು ಎಷ್ಟೋ ಹೊತ್ತಿನ ವರೆಗೆ ಸೂಕ್ಷ್ಮರೀತಿಯಿಂದ ಪರೀಕ್ಷಿಸಿ ನೋಡಿದರು; ಮತ್ತು ನಡುನಡುವೆ ಅವಳಿಗೆ ಪ್ರಶ್ನೆ ಮಾಡಿದರು. ಅತ್ತ ಮೇರಿಯಾದರೂ ಕೃಷ್ಣೆಯ ಹೊಟ್ಟೆಗೆ ಎಣ್ಣೆ ಹಚ್ಚಿ ತಿಕ್ಕುತ್ತ ಭಾಗೀರಥಿದೇವಿಯು ಪ್ರಕೃತಿಯ ವಿಷಯವಾಗಿ ಎಷ್ಟೋ ಪ್ರಶ್ನೆಗಳನ್ನು ಕೇಳುತ್ತಿದ್ದಳು ಈ ಮೇರೆಗೆ ಅವರಿಬ್ಬರೂ ಆ ಬಡ ಕುಟುಂಬದವರ ವಿಷಯವಾಗಿ ಪ್ರತಿಯೊಂದು ಸಂಗತಿಯನ್ನು ಅರಿತುಕೊಂಡರು.

ಆ ಮೇಲೆ ನರ್ಸ ಮೇರಿಯು ತನ್ನ ಅರಿವೆಗಳೊಳಗಿಂದ ಟಾವೆ ಲಿನಂಥ ದೊಡ್ಡದಾದ ಸ್ವಚ್ಛವಾದ ಅರಿವೆಯನ್ನು ತೆಗೆದು ಕೃಷ್ಣೆಯ ಹೊಟ್ಟೆಯ ಸುತ್ತಲೂ ಬೆಚ್ಚಗಾಗುವಂತೆ ಬಿಗಿದು ಸುತ್ತಿದಳು. ಈ ಪ್ರಕಾರ ಬಾಣಂತಿಯ ಎಲ್ಲದ ತರದ ವ್ಯವಸ್ಥೆಯನ್ನು ಮಾಡಿದ ಮೇಲೆ ನರ್ಸಳು ಕೂಸಿನ ಕಡೆಗೆ ತಿರುಗಿದಳು. ಅವಳು ಮೊದಲೇ ಅಂದರೆ ಅದು ಹುಟ್ಟಿದ ಕೂಡಲೆ ಅದರ ಕಣ್ಣು, ಮೂಗು, ಮೋರೆ ಮತ್ತು ಕುತ್ತಿಗೆಯನ್ನು ಬೋರಿನಿಕ್ ಏಸಿಡ್‌ದಲ್ಲಿ ತೊಯಿಸಿದ ಅರಿವೆಯಿಂದ ಜಳಜಳವಾಗುವಂತೆ ಒರಿಸಿದ್ದಳು ಆ ಮೇಲೆ ಅವಳು ಆ ಕೂಸನ್ನು ಸ್ವಚ್ಛವಾದ ಉಣ್ಣೆಯ ಅರಿವೆಯಲ್ಲಿ ಸುತ್ತಿ ಮಲಗಿಸಿ

ದ್ದಳು ಇಷ್ಟು ಕೂಸಿನ ಕೆಲಸವನ್ನು ತೀರಿಸಿಕೊಂಡು ಅವಳು ಕೃಷ್ಣೆಯ ಶುಶ್ರೂಷೆಗೆ ತೊಡಗಿದ್ದಳು. ಕೃಷ್ಣೆಯ ಸಂಬಂಧವಾಗಿ ಎಲ್ಲ ವ್ಯವಸ್ಥೆಯನ್ನು ಮಾಡಿದೊಡನೆ ನರ್ಸಳು ಸಾವಿತ್ರಿಗೆ ಬಿಸಿನೀರು ತರಲು ಹೇಳಿದಳು. ನೀರು ತರುವ ವರೆಗೆ ನರ್ಸಳು ಮತ್ತೊಮ್ಮೆ ಕೂಸಿನ ಪ್ರತಿಯೊಂದು ಇಂದ್ರಿಯವನ್ನೂ, ಅವಯುವ ವನ್ನೂ ಸೂಕ್ಷ್ಮರೀತಿಯಿಂದ ಪರೀಕ್ಷಿಸಿದಳು; ಆದರೆ ಅವಳಿಗೆ ಅವು ಗಳಲ್ಲಿ ಏನೂ ಕುಂದು ಕಂಡು ಬರಲಿಲ್ಲ. ಆ ಮೇಲೆ ನರ್ಸಳು ತನ್ನ ಪೆಟ್ಟಿಗೆಯೊಳಗಿಂದ 'ಹ್ಯಾಸಲಿನ್' ಡಬ್ಬಿಯನ್ನು ಹೊರತೆಗೆದು ಅದನ್ನು ಕೂಸಿನ ಮೈಗೆ ಚನ್ನಾಗಿ ತಿಕ್ಕಿ ತಿಕ್ಕಿ ಹಚ್ಚಿ ಹುಟ್ಟಿದ ಕೂಡಲೆ ಅದರ ಶರೀರಕ್ಕೆ ಅಂಟಿಕೊಂಡ ಜಿಗಟು ಪದಾರ್ಥವನ್ನು ಇಲ್ಲದಂತೆ ಮಾಡಿದಳು. ಇಷ್ಟರಲ್ಲಿಯೇ ಸಾವಿತ್ರಿಯು ನೀರು ತಂದು ಕೊಟ್ಟಳು. ಆ ಮೇಲೆ ಅವಳ ಸಹಾಯದಿಂದ ಅವಳು ಕೂಸಿಗೆ ಸಬಕಾರ ಹಚ್ಚಿ ಮೈಯುಜ್ಜಿ ಸ್ವಚ್ಛವಾಗಿ ಎರೆದಳು. ಆ ಮೇಲೆ ಕೂಸಿನ ಮೈಯನ್ನು ಅರಿವೆಯಿಂದ ಒರಿಸುತ್ತ ಅವಳು ಕೃಷ್ಣೆಯ ಕಡೆಗೆ ನೋಡಿ:—"ಕೃಷ್ಣಾಬಾಯಿ, ನಾನು ಬೋರಿಕ್ ಹ್ಯಾಸಿಡಿನ ಔಷಧದ ನೀರಿನ ಶೀಸೆಯನ್ನೂ ಈ ಟಾವೆಲ್, ಮತ್ತು ಪಾವುಡರ (ಪುಡಿ) ವನ್ನೂ ಇಲ್ಲಿಯೇ ಇಟ್ಟು ಹೋಗುತ್ತೇನೆ. ನೀವು ರಾತ್ರಿ ಯಲ್ಲಿ ಈಗಿನಂತೆ ಇನ್ನೊಮ್ಮೆ ಕೂಸಿನ ಮೂಗು, ಕಣ್ಣು, ಮೋರೆ ಮೊದಲಾದ ಎಲ್ಲ ಅವಯುವಗಳನ್ನು ಒದ್ದೆ ಅರಿವೆಯಿಂದ ತೊಳೆದು ಒರಿಸಿ ತೆಗೆಯಿರಿ; ಮತ್ತು ಈ ಪುಡಿಯನ್ನು ಅದರ ಮೈ ಮೇಲೆ ಅಲ್ಲಲ್ಲಿ ಹಚ್ಚಿಬಿಡಬೇಕು, ಎಂದು ಅಂದಳು.

ಡಾ ಸಾಹೇಬರೂ ಕೃಷ್ಣೆಯ ಕಡೆಗೆ ನೋಡಿ:"ನೀವು ಹೀಗೆ ನೆಲದ ಮೇಲೆ ಮಲಗಬೇಡಿರಿ ಬಾಣಂತಿಯ ಸಲುವಾಗಿ ಒಂದು ಹೊ ರಸು ಬೇರೆ ಬೇಕು. ಇಲ್ಲಿಯೇ ಎಲ್ಲಿಯಾದರೂ ದೊರೆತರೆ ಕೇಳಿರಿ."

ಅಷ್ಟರಲ್ಲಿಯೇ ಸಾವಿತ್ರಿಯು:“ಸಾಹೇಬರೇ, ದುರ್ಗಾಬಾಯಿ ಯವರ ಮನೆಯಲ್ಲಿ ಒಂದು ಹೊರಸು ಇದೆ. ಅದನ್ನು ಇಸಕೊಂಡು ಬರುವೆವು,'' ಎಂದು ಅಂದಳು.

“ಒಳ್ಳೇದು; ನಾಳಿನ ದಿವಸ ತಪ್ಪದೆ ತರಿಸಿರಿ.'' ಹೀಗೆಂದು ಡಾ. ಸಾಹೇಬರು ಭಾಗೀರಥಿದೇವಿಯ ಕಡೆಗೆ ತಿರುಗಿ:“ಅವ್ವಾ, ನಿಮಗೆ ಜಡ್ಡು ಇರುವದರಿಂದ ನೀವು ಈ ಬಾಣಂತಿಯ ಕೋಣೆ ಯಲ್ಲಿ ಮಲಗುವದು ಸರಿಯಲ್ಲ; ಆದರೂ ಉಪಾಯವೇ ಇಲ್ಲ. ನೀವು ನಡುವೆ ಒಂದು ಪರದೆಯನ್ನು ಇಳಿ ಬಿಟ್ಟು ಮಲಗಿಕೊಳ್ಳಿರಿ; ಮತ್ತು ಈ ಕಿಡಿಕೆಯನ್ನು ಯಾವಾಗಲೂ ತೆರೆದು ಇಡಿರಿ'' ಹೀಗೆಂದು ನರ್ಸಳ ಕಡೆಗೆ ತಿರುಗಿ “ಒಳ್ಳೇದು ನರ್ಸ, ನಿಮ್ಮ ಕೆಲಸವು ಮುಗಿಯಿತೇ? ನಡೆಯಿರಿ, ಇನ್ನು ನಾವು ಹೋಗೋಣ; ಆದರೆ ಭಾಗೀರಥಿದೇವೀ, ನಿಮ್ಮ ಹುಡುಗನು ಕಾಣುವದಿಲ್ಲವಲ್ಲ, ಎಲ್ಲಿ ಹೋದನು?''

ಸದಾಶಿವನು ಹೊರಗೆ ಹೋದವನು ಇನ್ನೂವರೆಗೆ ಬಂದಿ ದ್ದಿಲ್ಲ. ಅವನು ತನ್ನ ಸಂದುಕದೊಳಗಿಂದ ತನಗೆ ಬೇಕಾದ ಪದಾ ರ್ಥವನ್ನು ತಕ್ಕೊಂಡು ವಾಮನರಾಯನೊಡನೆ ಮಾರವಾಡಿಯ ಕಡೆಗೆ ಸಾಲ ತೆಗೆಯಲಿಕ್ಕೆ ಹೋಗಿದ್ದನು ಆದ್ದರಿಂದ ವಾಚಕರೇ, ನಡೆಯಿರಿ; ನಾವೂ ಅಲ್ಲಿಯವರೆಗೆ ಹೋಗಿ ಅವನ ಸ್ಥಿತಿ-ಗತಿಯು ಏನಾಗಿದೆ ನೋಡುವ.



## ೯ನೆಯ ಪ್ರಕರಣ.

# ಮಾರವಾಡಿಯ ಸಾವುಕಾರಿಕೆ.

"ಇವೆಂಥಾ ಸಾಮಾನ ನಮ್ಮ ಕಡೆ ತಂದಿರಪ್ಪಾ? ಇದರೊಳಗೆ ಏನ ಐತಿ? ಈ ಸೀರಿ ಹೊಲಸಾಗಿ ಹೋಗ್ಯೆತಿ; ಮತ್ತು ಆ ಜರಟೋಪಿ ಅಂತೂ ಅಗದೀ ಹಳೇದಾಗ್ಯೆತಿ! ಈ ಜಿನಸಾ ನಮಗೆ ಬೇಡಾ ಹೊಸಾವ ಇದ್ದರೆ ತಗೊಂಡು ಬಾ."

"ಶೇಟ ಹೀಗೇಕೆ ಮಾಡುವಿರಿ? ಹಳೇ ಸಾಮಾನಗಳಾದರೂ ಅವುಗಳ ಬೆಲೆಯು ಎಲ್ಲಿ ಹೋದೀತು? ಈ ಸೀರಿಯು ಹೊಸದು ಇದ್ದಾಗ್ಗೆ ೪೦ ರೂಪಾಯಿ ಕೊಟ್ಟದೆ."

"ಹಾ ಹಾ, ಅದು ನಮಗ ತಿಳಿತಾವ! ಹೊಸಾದಿದ್ದಾಗ ಬಂಗಾರದ್ದಾಗಿದ್ದೀತು; ಆದರೆ ಈಗ ಕಬ್ಬಿಣ ಆಗೇತಿ! ಈಗ ಈ ಹಳೇ ಜಿನಸಾ ಯಾರ ಕೇಳತಾರ."

ಮೇಲಿನ ಮಾತುಗಳು ಎಲ್ಲಿ ನಡೆದಿದ್ದವೆಂಬದು ವಾಚಕರ ಲಕ್ಷ್ಯಕ್ಕೆ ಸಹಜವಾಗಿ ಬಂದಿರಬಹುದು. ವಾಮನರಾಯರು ಸದಾಶಿವನೊಡನೆ ಹಿಂದೆ ಹೇಳಿದ ಮಾರವಾಡಿಯ ಅಂಗಡಿಗೆ ಬಂದಿದ್ದರು. ಅವರು ಮಾರವಾಡಿಯ ಕೈಯಲ್ಲಿ ತಾವು ಒಯ್ದ ಸೀರೆ ಟೊಪ್ಪಿಗೆ ಕೊಟ್ಟ ಕೂಡಲೆ ಅವನು ಅವುಗಳನ್ನು ಎಷ್ಟೋ ಹೊತ್ತಿನ ವರೆಗೆ ಅತ್ತಿತ್ತ ಹೊರಳಿಸಿ ನೋಡಿ ಮೇಲಿನ ಉದ್ಗಾರಗಳನ್ನು ತೆಗೆದನು. ವಾಚಕರೇ, ಬೇರೆ ಕಾದಂಬರಿಗಳೊಳಗೆ ಬರೆದದ್ದಕ್ಕಿಂತ ಈ ಕಥೆಯೊಳಗಿನ ಕೆಲವು ಭಾಗಗಳನ್ನು ನಾವು ಹೆಚ್ಚು ವಿಸ್ತರಿಸಿ ಬರೆದಿರುವೆವೆಂದು ನಿಮಗೆ ಕಂಡು ಬರಬಹುದು; ಆದರೆ ಈ ಪ್ರಕರಣವನ್ನು ಓದುತ್ತಿರು

ವಾಗ್ಗೆ ನಿಮಗೆ ಬೇಸರಿಕೆ ಬರಲಿಕ್ಕಿಲ್ಲವೆಂದು ನಮಗೆ ನಂಬಿಗೆಯುಂಟು.

ನಿಜವಾದ ವಸ್ತುಸ್ಥಿತಿಯನ್ನು ಇದ್ದಕ್ಕಿದ್ದಂತೆ ನಿಮ್ಮ ಕಣ್ಣು ಮುಂದಿಡುವದೇ, ನಮ್ಮ ಈ ವಿಸ್ತೃತ ಬರವಣಿಗೆಯ ಮುಖ್ಯ ಉದ್ದೇಶವಿರುತ್ತದೆ. ಇರಲಿ.

“ಶೇಟಜಿ, ಹೀಗೇಕೆ ಮಾಡುವಿರಿ? ನೋಡಿರಿ, ನಾವು ಬಹಳ ಸಂಕಟದಲ್ಲಿ ಸಿಕ್ಕಿದ್ದೇವೆ. ಅಂತೆಯೇ ನಿಮ್ಮ ಕಡೆಗೆ ಇಷ್ಟು ಆತುರತೆಯಿಂದ ಓಡಿ ಬಂದೆವು”

“ಬಂದದ್ದು ಛಲೋ ಆತು! ಆದರ ಈ ಹಳೇ ಜಿನಸಾ ಯಾಕ ತಂದಿರಿ? ಬೆಳ್ಳಿ-ಬಂಗಾರದ ದಾಗಿನೆ ಇದ್ದರೆ ತಗೊಂಡು ಬಾ. ಅಂದರ ನಾವ ರೋಖ ರುಪಾಯಿ ಕೊಡತೇವ್”

“ಅಲಂಕಾರಗಳಿದ್ದರೆ ಈ ಸಾಮಾನುಗಳನ್ನೇಕೆ ತರುತ್ತಿದ್ದೆವು? ಒಳ್ಳೇದು, ಆದಿರಲಿ. ಸದ್ಯಕ್ಕೆ ಈ ಸಾಮಾನುಗಳ ವಿಷಯಕ್ಕೆ ನಮಗೆ ಹೇಳಿರಿ. ನಮಗೆ ಇಪ್ಪತ್ತೈದು ರೂಪಾಯಿಗಳು ಅವಶ್ಯವಾಗಿ ಬೇಕಾಗಿವೆ”

“ಎಲಾ, ಇವರ್! ನಮ್ಮದೇನ ಥಟ್ಟಾ ಮಾಡಾಕ ಹತ್ತೀರಿ ನೀವ್! ಈ ಜಿನಸಾ ತಗೊಂಡ ಯಾವನೂ ಐದು ರೂಪಾಯಿನೂ ಕೊಡಾಕಿಲ್ಲ. ಇದರಾಗ ಐತೇನ್?”

“ಶೇಟಜೀ ಸುಮ್ಮನೇ ನಮ್ಮ ಅಂತವನ್ನು ನೋಡಬೇಡಿರಿ! ಪ್ರಸಂಗ ಬಂದದ್ದರಿಂದ ನಾವು ನಿಮ್ಮ ಬಾಗಿಲಿಗೆ ಬಂದೆವು.”

“ಏನಪಾ, ಅದ ನಮಗ ತಿಳಿತಾವ್! ಪಣ್ ನಾವಾರ ಏನ್ ಮಾಡಬೇಕ? ನಮ್ಮ ರುಪಾಯಿ ಆದರೂ ಗಿಡಕ ಹತ್ತಿದಾವ ಏನ್? ಹೂ-ಹೋಗೆಲೆಪಾ. ನಿಮಗ, ಅಡಚಣಿ ಇದ್ದ ಮ್ಯಾಗ ಈ ಐದು ರುಪಾಯಿ ಕೊಡತೇವ್ ತಗೊಂಡ ಹೋಗ್” ಹೀಗೆಂದು ಮಾರವಾಡಿಯು ಪೆಟ್ಟಿಗೆಯನ್ನು ತೆರೆದು ಐದು ರೂಪಾಯಿಗಳನ್ನು

ಹೊರಗೆ ತೆಗೆದನು; ಮತ್ತು ಅವರ ಮುಂದೆ ಝುಣ್ ಝುಣ್ ಎಂದು ಎಣಿಸಿದನು; ಆದರೆ ವಾಮನರಾಯರು ಅವುಗಳನ್ನು ಮುಟ್ಟಲಿಲ್ಲ. ಅವರು ಕ್ಷಣಹೊತ್ತಿನ ವರೆಗೆ ಅವುಗಳ ಕಡೆಗೆ ನೋಡಿ: 'ಶೇಟಜಿ ನೀವು ದುಡ್ಡು ಮುಳುಗುವದೆಂದು ಬೆದರಬೇಡಿರಿ' ನಮ್ಮ ಅಡಚಣಿಯನ್ನು ಲಕ್ಷ್ಯಕ್ಕೆ ತಂದು ತಕ್ಕ ಸಹಾಯ ಮಾಡಿದರೆ ನಿಮ್ಮ ಹಣವನ್ನು ಬಹಳ ದಿನ ಇಟ್ಟುಕೊಳ್ಳುವದಿಲ್ಲ."

"ಅರ'! ನೀವ್ ಹಿಂಗೇನ ಶಿಕ್ಯಾಂಗ ಮಾತಾಡತೀರಿ. ನಮ್ಮ ರೊಕ್ಕಾ ಏನ ಹಾದೀವ್ಯಾಗ ಬಿದ್ದಾವೇನ'?"

ಎಷ್ಟೋ ಹೊತ್ತಿನ ವರೆಗೆ ತಲೆಯನ್ನು ಹಿಡಕೊಂಡ ಮೇಲೆ, ಮಾರವಾಡಿಯು ಮತ್ತೆ ಎರಡು ರೂಪಾಯಿಗಳನ್ನು ತೆಗೆದು ಕೊಟ್ಟನು; ಆದರೆ ಬರೇ ಏಳು ರೂಪಾಯಿಗಳಿಂದ ಸದಾಶಿವನ ಅಡಚಣಿಯು ಹಿಂಗುವಂತಿದ್ದಿಲ್ಲ. ಮತ್ತೆ ಕೈ-ಕಾಲ ಬಿದ್ದಮೇಲೆ ಶೇಟಜಿಯು ಅತಿ ಪ್ರಯಾಸದಿಂದ ಮತ್ತೊಂದು ರೂಪಾಯಿಯನ್ನು ಹೊರಗೆ ತೆಗೆದನು ಆಗ ವಾಮನರಾಯರು "ಶೇಟಜೀ ನಿಮಗೆ ಸುಳ್ಳು ಕಂಡರೆ ನಾನು ಆಣೆ ಮಾಡಿ ಹೇಳುತ್ತೇನೆ. ಈ ದೀಪದ ಮುಂದೆ ಕುಳಿತು ನಾನು ಸುಳ್ಳು ಆಡುವದಿಲ್ಲ; ನಮ್ಮ ಮೇಲೆ ಅತಿ ಕಠಿಣ ಪ್ರಸಂಗವು ಬಂದಿರುವದು. ೨೫ ರೂಪಾಯಿಗಳನ್ನು ಕೊಡದಿದ್ದರೆ, ಇಪ್ಪತ್ತು ರೂಪಾಯಿಗಳನ್ನಾದರೂ ಕೊಡಿರಿ" ಎಂದು ಅಂದರು.

"ಏನ್ ಕೊಡತಾರ್, ರೂಪಾಯಿ ಅಂದರ ಹುಣಚೀಪಕ್ಕ ಆದಾವೇನ'?"

"ಶೇಟಜೀ, ನನ್ನ ಕಡೆಗೆ ನೋಡಿರಿ ನಾನು ನಿಮ್ಮ ಕಾಲು ಬೀಳುತ್ತೇನೆ" ಸದಾಶಿವನು ಹೀಗೆ ಕೋಮಲ ಸ್ವರದಿಂದ ಅಂದು

ತನ್ನ ಎರಡೂ ಕೈಗಳನ್ನು ಜೋಡಿಸಿ ಬೇಡಿಕೊಂಡನು. "ಅಪ್ಪಾ! ಸದಾಶಿವಾ, ನಿನ್ನ ಮೇಲೆ ಎಂಥ ಕಠಿಣ ಪ್ರಸಂಗವು ಬಂದಿರುವದು."

"ಹಾಗಾದರ್ ನೀವ್ ಹೀಗೆ ಮಾಡಬೇಕ್, ನಮಗ ೨೫ ರೂಪಾಯದ ಕಾಗದಾ ಬರದು ಕೊಡ್ರಿ, ಅಂದರೆ ನಾವು ನಿಮಗೆ ಹನ್ನೆರಡ್ ರೂಪಾಯಿ ಕೊಡತೇವ್"

ಕಡೆಗೆ ವಾಮನರಾಯರು ನಿರುಪಾಯದಿಂದ ಕಾಗದ ಬರೆದುಕೊಡಲಿಕ್ಕೆ ಸಿದ್ಧರಾದರು. ಅಂದಮೇಲೆ ಕೇಳುವದೇನು? ಕೂಡಲೆ ಮಾರವಾಡಿಯು ಕಾಗದ ಬರೆಯಿಸಿ ಅದರ ಕೆಳಗೆ ಒಂದು ಆಣೆಯ ಟಿಕೀಟು ಸಹ ಹಚ್ಚಿಸಿದನು. ವಾಮನರಾಯರು ಬಾಯಿ ಮುಚ್ಚಿಕೊಂಡು ಅದರ ಮೇಲೆ ಸಹಿ ಮಾಡಿದರು. ಅದನ್ನು ನೆಟ್ಟಗೆ ನೋಡಿಕೊಂಡು, ಚೆನ್ನಾಗಿ ಮಡಿಚಿ ಮಾರವಾಡಿಯು ಅದನ್ನು ತನ್ನ ಪೆಟ್ಟಿಗೆಯಲ್ಲಿ ಭದ್ರವಾಗಿ ಇಟ್ಟುಕೊಂಡನು. ಆ ಮೇಲೆ ಅವನು ಒಟ್ಟು ಹದಿನೆಂಟು ರೂಪಾಯಿ ಹನ್ನೊಂದು ಆಣೆಗಳನ್ನು ಅವರ ಮುಂದೆ ಎಣಿಸಿದನು.

"ಇದೇನು ಶೇಟಜೀ ಇಷ್ಟೇ?"

"ಹ ಮತ್ತೇನ್ ಮಾಡಬೇಕ್. ಒಂದು ರೂಪಾಯಿಗೆ ಒಂದಾಣೆ ಬಡ್ಡಿಯಂತೆ, ೨೦ ರುಪಾಯಕ, ಸವಾರೂಪಾಯು ಬಡ್ಡಿ ಆಯಿತ; ಮತ್ತ 'ಇಷ್ಟಾಪಿಂದ' ಒಂದು ಆಣೆ ಯಾರ ಕೊಡಬೇಕ?"

"ಬಡ್ಡಿಯನ್ನು ಆ ಮೇಲೆ ಕೊಡುವೆವು. ಸ್ಟಾಂಪಿನ ಒಂದಾಣೆ ಮುರಕೊಂಡು ಬಾಕಿ ಎಲ್ಲ ಹಣ ಕೊಡಿರಿ."

"ಹಿಂಗೆಲ್ಲಿಯ ವ್ಯಾಪಾರ ಮಾಡಂತೀ! ಬಡ್ಡೀ ರುಪಾಯ ನಾವು ಮೊದಲ್ ಮುರಕೊಂಬೋ ಅವರ್. ಇದ ನಮ್ಮ ಕಸಬ್ ಐತಿ."

ಕಟ್ಟಕಡೆಗೆ ಅತಿ ಕಷ್ಟದಿಂದ ವಾಮನರಾಯರು ೧೮ ರೂ.

೧೧ ಆಣೆಗಳನ್ನು ಎಣಿಸಿಕೊಂಡು ಅಲ್ಲಿಂದ ಎದ್ದರು. ಇಬ್ಬರೂ ಬೀದಿಗುಂಟ ಮನೆಗೆ ಹೋಗುತ್ತಿರುವಾಗ ವಾಮನರಾಯರು ಸದ್ಗದಿತ ಕಂಠದಿಂದ "ದೇವರೇ ನನ್ನ ವೈರಿಗಳಿಗೆ ಕೂಡಾ ಈ ಮಾರವಾಡಿಯ ಕಟ್ಟೆಯನ್ನು ಹತ್ತುವ ಪ್ರಸಂಗ ತರಬೇಡ!'' ಎಂದು ಬೇಡಿಕೊಂಡರು.

"ರಾಯರೇ, ಇನ್ನು ಮುಂದೆ ಹೇಗೆ ಮಾಡಬೇಕು?''

"ಇನ್ನು ಮಾಡತಕ್ಕದ್ದೇನಿರುವದು? ಇದ್ದದ್ದರಲ್ಲಿಯೇ ಹೇಗಾದರೂ ಸಾಗಿಸಿಕೊಂಡು ಹೋಗಲಿಕ್ಕೆ ಬೇಕು ಇಗೋ ಇದರಲ್ಲಿ ಡಾಕ್ಟರಸಾಹೇಬರಿಗೆ ಹತ್ತು ರೂಪಾಯಿಗಳನ್ನು ಕೊಡು; ನರ್ಸಳಿಗೆ ೫ ರೂಪಾಯಿಗಳನ್ನು ಕೊಡು; ಮತ್ತು ಮೋಟಾರದ ಬಾಡಿಗೆಗೆ ನಾಲ್ಕು ಇಲ್ಲವೆ ಐದು ರೂಪಾಯಿಗಳನ್ನು ಕೊಟ್ಟು, ಉಳಿದ ಐದು ರುಪಾಯಿಗಳನ್ನು ಖರ್ಚಿಗೆ ಇಟ್ಟುಕೋ ಶ್ರೀಪಾದರಾಯರ ಕಡೆಯಿಂದ ಮತ್ತೆ ರೂಪಾಯಿಗಳು ಬರುವ ವರೆಗೆ ಎನಿಲ್ಲೆಂದರೂ ೪-೫ ರುಪಾಯಿಗಳು ಖರ್ಚಿಗೆ ಬೇಕೇಬೇಕು.''

"ಇಷ್ಟರ ಮೇಲಿಂದ ಕೆಲಸವಾಗಬಹುದೇ? ಆ ಉನ್ಮತ್ತನಾದ ರಾಜೇ ಡಾಕ್ಟರನು ಒಂದು ವ್ಹಿಜಿಟಗೆ ಇಪ್ಪತ್ತು ರೂಪಾಯಿಗಳಿಲ್ಲದೆ ಮನೆಗೆ ಬರುವದಿಲ್ಲ; ಮತ್ತು, ಈ ಡಾಕ್ಟರರು ಎಮ್. ಡಿ. ಇದ್ದು ಯುರೋಪಿಯನ್ನರಿರುವರು; ಇದಲ್ಲದೆ, ಅವರು ಇಲ್ಲಿ ಎರಡು ಎರಡೂವರಿ ತಾಸು ನಿಂತು ಎಲ್ಲ ಬಾಣಂತಿತನದ ಕೆಲಸವನ್ನು ತೀರಿಸಿದರು.''

"ಅದೆಲ್ಲವೂ ನಿಜವು; ಆದರೆ ಈಗ ಏನು ಮಾಡಬೇಕೆಂಬದನ್ನು ನೀನೇ ಹೇಳು''

ಸದಾಶಿವನು ಮನೆಗೆ ಮುಟ್ಟಿದಾಗ್ಗೆ ಸುಮಾರು ರಾತ್ರಿ ೮ ಹೊಡೆಯುವ ವೇಳೆಯಾಗಿತ್ತು. ಡಾ. ಸಾಹೇಬರು ಹೊರಡುವ

ಸಿದ್ಧತೆಯಲ್ಲಿದ್ದರು. ನರ್ಸಮೇರಿಯು ಕೂಸಿಗೆ ಹಾಲು ಕುಡಿಸು ವದರ ವಿಷಯವಾಗಿ ಮತ್ತು ಕೃಷ್ಣೆಯ ಊಟ ಪಥ್ಯಗಳ ವಿಷ ಯವಾಗಿ ಚನ್ನಾಗಿ ತಿಳಿಸಿ ಹೇಳಿ, ತಾನು ತಂದ ಸ್ವಚ್ಛವಾದ ಟಾವೆಲ, ಅರಿವೆ, ಉಣ್ಣೆಯ ವಸ್ತ್ರ ಮೊದಲಾದವುಗಳನ್ನು ಕೂಸಿನ ಸಲುವಾಗಿ ಅಲ್ಲಿಯೇ ಇಟ್ಟಳು; ಮತ್ತು ಆವಳೂ ಹೊರಡಲನುವಾ ದಳು. ಇಷ್ಟರಲ್ಲಿಯೇ ಸದಾಶಿವನು ಮನೆಗೆ ಬಂದದ್ದನ್ನು ನೋಡಿ, ಡಾಕ್ಟರರು:-"ಸದಾಶಿವಾ, ನಾವು ಇನ್ನು ಹೋಗುತ್ತೇವೆ. ನಿಮ್ಮ ಅಕ್ಕನು ಸುರಕ್ಷಿತವಾಗಿ ಪ್ರಸೂತಿಳಾದದ್ದನ್ನು ಕಂಡು ನಮಗೆ ಅತ್ಯಾನಂದವಾಗಿರುತ್ತದೆ. ನೀನು ನಾಳಿನ ದಿವಸ ನಮ್ಮ ದವಾ ಖಾನೆಗೆ ಬಾ. ನಾನು ನಿಮ್ಮ ತಾಯಿಗೆ ಒಂದು ಚಲೋ ಔಷಧ ವನ್ನು ಕೊಡುತ್ತೇನೆ. ಆ ಔಷಧದಿಂದ ಇವರಿಗೆ ಪೂರ್ಣ ಗುಣವಾ ಗುವದೆಂದು ನನಗೆ ನಂಬಿಗೆಯಿದೆ" ಎಂದು ಹೇಳಿದರು; ಮತ್ತು "ನರ್ಸ, ನಡೆಯಿರಿ, ಇನ್ನು ಹೋಗೋಣ," ಎಂದು ನರ್ಸಳನ್ನು ಕುರಿತು ಅಂದರು

ಇಷ್ಟರಲ್ಲಿ ಭಾಗೀರಥಿದೇವಿಯು ತನ್ನ ಹೊರಸಿನ ಮೇಲಿಂದ ಬೊಗ್ಗಿ, ನರ್ಸಳ ಪಾದಗಳ ಮೇಲೆ ತನ್ನ ಎರಡೂ ಹಸ್ತಗಳನ್ನಿಟ್ಟು ಸದ್ಗದಿತ ಅಂತಃಕರಣದಿಂದ: ನರ್ಸಬಾಯಿಯವರೇ, ನೀವು ಮಾಡಿದ ಉಪಕಾರವನ್ನು ನಾನು ಸಾಯುವವರೆಗೂ ಮರೆಯಲಿಕ್ಕಿಲ್ಲ ಇವ ತ್ತಿನ ದಿವಸ ನೀವೂ ಮತ್ತು ಡಾ. ಸಾಹೇಬರೂ ಕೂಡಿ ನನ್ನ ಮಗಳಿಗೆ ಜೀವದಾನ ಮಾಡಿದಿರಿ ಈ ನಿಮ್ಮ ಉಪಕಾರವು ನನ್ನ ಮೈದೊಗಲಿನ ಮೆಟ್ಟುಗಳನ್ನು ಹೊಲಿದು ನಿಮ್ಮ ಕಾಲುಗಳಲ್ಲಿ ಹಾಕಿದರೂ ಪೂರಾ ತೀರದು. ದೇವರು ನಿಮಗೆ ಕಲ್ಯಾಣ ಮಾಡಲಿ! ಎಂದು ಅಂದಳು

ಭಾಗೀರಥಿದೇವಿಯು ಬಾಯಿಂದ ಬಂದ ಈ ಅಂತಃಕರಣ

ಪೂರ್ವಕವಾದ ಆಶೀರ್ವಾದದಿಂದ ನರ್ಸಳಿಗೂ ಡಾ. ಸಾಹೇಬರಿಗೂ ತಮ್ಮ ಸರ್ವ ಪರಿಶ್ರಮಕ್ಕೆ ತಕ್ಕ ಫಲವು ಸಿಕ್ಕಹಾಗಾಯಿತೆಂದು ಅನಿಸಿತು. ನರ್ಸಳು ಅವಳಿಗೆ: "ಅಮ್ಮಾ, ನಾನು ಇದರಲ್ಲಿ ಹೆಚ್ಚಿನದೇನು ಮಾಡಿದೆನು? ಇದೊಂದು ನನ್ನ ಕರ್ತವ್ಯವನ್ನು ನಾನು ಮಾಡಿದೆನು!"

ಇಷ್ಟರಲ್ಲಿಯೇ ಸದಾಶಿವನು ಡಾ. ಸಾಹೇಬರ ಹತ್ತಿರ ಹೋಗಿ ಹತ್ತು ರೂಪಾಯಿಯ ನೋಟನ್ನು ಮುಂದೆ ಮಾಡಿ ದುಃಖಿತ ಸ್ವರದಿಂದ "ಡಾಕ್ಟರ ಸಾಹೇಬರೇ, ನಾವು ಬಹಳ ಬಡವರಿದ್ದೇವೆ; ನಮ್ಮ ಸ್ಥಿತಿಯು ಅತಿ ಶೋಚನೀಯವಿರುತ್ತದೆ. ನೀವು ನಮ್ಮ ಮೇಲೆ ಎಣೆಯಿಲ್ಲದಷ್ಟು ಉಪಕಾರ ಮಾಡಿದ್ದೀರಿ. ಅದನ್ನು ನಾವು ತೀರಿಸುವದಂತೂ ತೀರ ಅಸಾಧ್ಯವು? ಆದರೆ ನಾವು ಕೊಟ್ಟದನ್ನೇ ಸಂತೋಷದಿಂದ ಸ್ವೀಕರಿಸಬೇಕು. ನಮ್ಮ ಬಡತನವನ್ನು ಲಕ್ಷ್ಯಕ್ಕೆ ತರಬೇಕು" ಎಂದು ವಿನಯಪೂರ್ವಕವಾಗಿ ಹೇಳಿಕೊಂಡನು.

"ಇದನ್ನೇನು ನನಗೆ ಕೊಡುತ್ತಿರುವಿ? ಹತ್ತು ರೂಪಾಯಿ" ಎಂದು ಸದಾಶಿವನ ಕೈಯಲ್ಲಿಯ ನೋಟು ನೋಡಿ, ಅವನ ಮುಖದ ಕಡೆಗೆ ನೋಡುತ್ತ ಡಾ. ಸಾಹೇಬರು ಅಂದರು. ಈ ಶಬ್ದಗಳನ್ನು ಕೇಳಿ ಸದಾಶಿವನ ಎದೆಯು ಧಸ್ ಎಂದಿತು! ಅವರು ಮಾಡಿದ ಪ್ರಯತ್ನಕ್ಕೆ ತೀರ ಕಡಿಮೆ ಫೀ ಕೊಡುವೆನೆಂದು ಡಾ. ಸಾಹೇಬರು ಸಿಟ್ಟಿಗೆದ್ದಿರುವರೆಂದು ಅವನು ತಿಳಕೊಂಡನು. ಅವನಿಗೆ ದಿಗಿಲು ಬಿದ್ದಿತು ಇನ್ನೂ ಹೆಚ್ಚಿಗೆ ಐದು ರೂಪಾಯಿ ಕೊಟ್ಟರೆ ಶ್ರೀಪತರಾಯರ ರೂಪಾಯಿಗಳು ಬರುವ ವರೆಗೆ ಮನೆಯ ಖರ್ಚಿಗೆ ಒಂದು ಪೈ ಸಹ ಉಳಿಯುವದಿಲ್ಲೆಂದು ಅವನು ಚಿಂತೆಗೊಳಗಾದನು; ಆದರೆ ಅದು ಬಹಳ ವಿಚಾರ ಮಾಡುತ್ತ ಕೂಡುವ ವೇಳೆಯಲ್ಲವೆಂದು ತಿಳಿದು, ಅವನು ಮತ್ತೊಂದು ಐದು ರೂಪಾಯಿಯ

ನೋಟಿನ್ನು ಹೊರಗೆ ತೆಗೆದು ಮುಂದೆ ಮಾಡಿ, "ಡಾಕ್ಟರ ಸಾಹೇಬರೇ, ನಾವು ಅಷ್ಟದರಿದ್ರರಿರುವೆವು! ಈ ಇಪ್ಪತ್ತು ರೂಪಾಯಿಗಳನ್ನು ದೊರಕಿಸಲಿಕ್ಕೆ ನಾನು ಎಷ್ಟು ಪರಿಯಿಂದ ಪ್ರಯತ್ನ ಮಾಡಬೇಕಾಯಿತೆಂಬದು ತಮಗೆ ತಿಳಿದಿದೆ." ಸದಾಶಿವನ ಗಂಟಲು ಬಿಗಿದು ಬಂದು ಕಣ್ಣೀರುಗಳು ಪಟಪಟನೆ ಸುರಿಯಹತ್ತಿದವು!! ಅವನ ಬಾಯಿಂದ ಮುಂದೆ ಶಬ್ದಗಳೇ ಹೊರಡದಾದವು!! ಅದನ್ನು ಕಂಡು ಡಾಕ್ಟರ ಸಾಹೇಬರು ಮುಂದೆ ಸರಿದು, ಅವನ ಹೆಗಲಮೇಲೆ ಕೈಯನ್ನಿಟ್ಟು ಪ್ರೇಮಲ ಸ್ವರದಿಂದ, "ಸದಾಶಿವಾ, ಹುಚ್ಚಾ, ನಾವು ಈ ಕಾರ್ಯವನ್ನು ಹಣದ ದೆಶೆಯಿಂದ ಕೈಕೊಂಡಿರುವೆವೆಂದು ನಿನಗೆ ತೋಚುವದೋ? ಇಲ್ಲ! ಇಲ್ಲ! ದುಡ್ಡು ಗಳಿಸುವದು ನಮ್ಮ ಧ್ಯೇಯವಲ್ಲ. ಕರ್ತವ್ಯದ ಮುಂದೆ ನಮಗೆ ದುಡ್ಡಿನ ಬೆಲೆಯೇ ಇಲ್ಲ; ಆದರೆ ನೀನು ಈ ಹಣವನ್ನು ಎಲ್ಲಿಂದ ತಂದಿ? ಎಲ್ಲಿಂದಾದರೂ ಅನೀತಿಯ ಮಾರ್ಗದಿಂದ ತಂದಿಲ್ಲವಷ್ಟೇ?"

"ಇಲ್ಲ-ಇಲ್ಲ-ಡಾಕ್ಟರ ಸಾಹೇಬ, ಹಾಗೆಂದಿಗೂ ಆಗದು. ನಮ್ಮ ಮೇಲೆ ಇದಕ್ಕಿಂತ ಹೆಚ್ಚಿನ ಕಠಿಣವಾದ-ಜೀವದ ಮೇಲಿನ ಪ್ರಸಂಗ ಬಂದರೂ ನಾವು ನೀತಿಯ ಮರ್ಯಾದೆಯನ್ನು ಎಂದೂ ಉಲ್ಲಂಘಿಸಲಿಕ್ಕಿಲ್ಲ"

"ವಾಹವ್ವಾ! ಸದಾಶಿವಾ, ಶಾಬಾಸ್!" ಅಳುವದನ್ನು ಬದಿಗೊತ್ತಿ ಉಕ್ಕೇ ಸ್ಫೂರ್ತಿಯಿಂದ ಸದಾಶಿವನ ಬಾಯಿಯಿಂದ ಹೊರಟ ಮೇಲಿನ ಮಾತುಗಳನ್ನು ಕೇಳಿ ಡಾಕ್ಟರ ಸಾಹೇಬರಿಗೆ ಕಡು ಹರುಷವುಂಟಾಯಿತು. ಇಷ್ಟೇ ಅಲ್ಲ, ಆದರೆ 'ಈ ಹುಡುಗನ ಕಲ್ಯಾಣವನ್ನು ಮಾಡಲಿಕ್ಕೆ ಬೇಕೆಂಬ' ಗುಪ್ತಭಾವನೆಯು ಅವರ ಮನಸ್ಸಿನಲ್ಲಿ ಉಂಟಾಯಿತು. ಆ ಮೇಲೆ ಅವರು "ನಾಳೆ ಮುಂಜಾನೆ ಒಂಬತ್ತು ಗಂಟೆಗೆ ನೀನು ನಮ್ಮ ದವಾಖಾನೆಗೆ ಬಾ; ಆದರೆ ನೀನು

ಈ ಹಣವನ್ನು ಎಲ್ಲಿಂದ ತಂದೆಯೆಂಬದನ್ನು ನನಗೆ ಹೇಳಲಿಲ್ಲವಲ್ಲ?''

"ಮಾರವಾಡಿಯ ಕಡೆಯಿಂದ ಸಾಲ ತಂದೆನು.''

"ಏನು, ಮಾರವಾಡಿಯ ಕಡೆಯಿಂದೆ? ಹೋಗು—ಈಗಿಂದೀಗಲೇ ಹೋಗಿ ತಿರುಗಿ ಕೊಟ್ಟು ಬಿಡು. ನಾವು ಇನ್ನು ಹೋಗುತ್ತೇವೆ'' ಹೀಗೆಂದು ಅವನು ತನ್ನ ಟೊಪ್ಪಿಗೆಯನ್ನು ಕೈಯಲ್ಲಿ ತಕ್ಕೊಂಡನು. ಇತ್ತ ಕಡೆಗೆ ನರ್ಸಳು ಮತ್ತೆ ಅಲ್ಲಿಯೇ ನಿದ್ರೆ ಹತ್ತಿ ಮಲಗಿದ ಕೂಸಿನ ಹತ್ತರ ಹೋಗಿ, ಮೊಣಕಾಲೂರಿ ಅದರ ಕಡೆಗೆ ಕ್ಷಣಹೊತ್ತು ನೋಡಿ: "ಏ ಕೂಸೇ ಮುದ್ದು ಕೂಸೆ, ಸ್ವಸ್ಥವಾಗಿ ಮಲಗು'' ಎಂದು ನುಡಿದು, ಮೆಲ್ಲಗೆ ಆ ಮಗುವಿನ ಸತೇಜವಾದ ಗಲ್ಲವನ್ನು ಚುಂಬಿಸಿದಳು; ಮತ್ತು ಕೃಷ್ಣೆಯ ಕಡೆಗೆ ತಿರುಗಿ "ಕೃಷ್ಣಾಬಾಯಿ ಸಲಾಮು'' ಎಂದು ನುಡಿದು ಹೊರಟಳು

ಡಾಕ್ಟರ ಸಾಹೇಬರೂ, ನರ್ಸಳೂ ಮೋಟಾರಿನಲ್ಲಿ ಹೋಗಿ ಕುಳಿತರು. ಸದಾಶಿವನೂ ಅಲ್ಲಿಗೆ ಬಂದು ಮೋಟಾರ ನಡಿಸುವವನಿಗೆ ಬಾಡಿಗೆ ಕೊಡಹೋದನು; ಆದರೆ ಡಾಕ್ಟರ ಸಾಹೇಬರು ಅದಕ್ಕೂ ಅಡ್ಡಿಮಾಡಿದರು; ಮತ್ತು "ನೀನು ನಾಳಿನ ದಿವಸ ದವಾಖಾನೆಗೆ ಬಾ; ಅಂದರೆ ಎಲ್ಲ ಸಂಗತಿಗಳ ಬಗ್ಗೆ ವಿಚಾರ ಮಾಡೋಣವಂತೆ'' ಎಂದು ಸದಾಶಿವನಿಗೆ ಹೇಳಿ, ಮೋಟಾರ ಬಿಡಲಿಕ್ಕೆ ಹೇಳಿದರು ಸದಾಶಿವನು ಮುಂದೆ ಎಷ್ಟೋ ಹೊತ್ತಿನ ವರೆಗೆ ಆ ಮೋಟಾರದ ಕಡೆಗೆ ನೋಡುತ್ತ ನಿಂತಿದ್ದನು. ಕಡೆಗೆ ಕಣ್ಮರೆಯಾದ ಬಳಿಕ ಅವನು ಹಿಂತಿರುಗಿದನು. ಅವನ ಮನಸ್ಸಿಗೆ ಎಷ್ಟೋ ಸಮಾಧಾನವುಂಟಾಗಿತ್ತು ಅವನು ತಮ್ಮ ಮನೆಗೆ ಹೋಗದೆ ನೆಟ್ಟಗೆ ನೆರೆಮನೆಯ ವಾಮನರಾಯರ ಕಡೆಗೆ ನಡೆದನು ಅವರು ಹೊರಗೆ ಹೊರಡುವ ಸಿದ್ಧತೆಯಲ್ಲಿದ್ದರು; ಆದರೆ ಸದಾಶಿವನನ್ನು ಕಂಡಕೂಡಲೆ ಅವರು "ಏನೋ ಸದಾಶಿವಾ, ಡಾಕ್ಟರರು ಎಷ್ಟು

ಫೀ ಇಸಕೊಂಡರು;ನೀನು ಕೊಟ್ಟದ್ದು ಸ್ವೀಕರಿಸಲಿಕ್ಕೆ ಅನುಮಾನ ಮಾಡಿದರೇನು?''

''ರಾಯರೇ, ಡಾಕ್ಟರ ಸಾಹೇಬರ ವಿಷಯಕ್ಕೆ ನಾನು ಎಷ್ಟೆಂದು ವರ್ಣಿಸಲಿ? ಅವರು ದೇವಲೋಕದಿಂದ ಇಳಿದು ಬಂದವರಾಗಿದ್ದಾರೆ; ನಿಜವಾಗಿ ಅವರು ದೊಡ್ಡ ಯೋಗ್ಯತೆಯುಳ್ಳವರಿದ್ದಾರೆ.'' ಎಂದು ಸದಾಶಿವನು ಸದ್ಗದಿತವಾದ ಸ್ವರದಿಂದ ಅದುವರೆಗೆ ನಡೆದ ಸರ್ವ ಸಂಗತಿಗಳ ವಿಷಯವಾಗಿ ತಿಳಿಸಿ ಹೇಳಿದನು

''ಇದಕ್ಕನ್ನಬೇಕು ನಿಜವಾದ ಭೂತದಯೆಯೆಂದು! ಆ ಡಾಕ್ಟರರೂ, ನರ್ಸಳೂ ಯುರೋಪಿಯನ್ನರು. ನಮ್ಮ ರಾಜ್ಯಕರ್ತರೂ ಯುರೋಪಿಯನ್ನರು? ಆದರೆ ಇವರಷ್ಟು ಭೂತದಯೆಯು ಆಳರಸರಿಗಿದ್ದರೆ ನಾವು ಹೀಗೆ ಪಾರತಂತ್ರ್ಯದಿಂದ ಕೊರಗುತ್ತಿದ್ದೆವೆ? ಇಂಗ್ರಜರಲ್ಲಿ ಕೆಲವರಾದರೂ ಭೂತದಯಾಪರರು-ನಮ್ಮ ಮೇಲೆ ಪ್ರೇಮ ಮಾಡುವವರು ಇರುವರು ಇದು ದುಃಖದಲ್ಲಿಯ ಸಂತೋಷ; ನಮ್ಮವರಾದ ರಾಜೇ ಡಾಕ್ಟರರು ಬಡವರ ಮೊರೆ ಕೇಳಲಿಲ್ಲ; ಆದರೆ ಪರಕೀಯರಾದವರಿಗೆ ದಯಬಂದಿತು! ಇರಲಿ. ಈಗ ಮಾರವಾಡಿಯ ಕಡೆಗೆ ಹೋಗಿ ರೂಪಾಯಿ ತಿರುಗಿ ಕೊಡೋಣ ನಡೆ;'' ಎಂದು ಇಬ್ಬರೂ ಹೊರಟು ಹೋದರು.

''ಕಿವ್ ವಾಮನರಾವ, ತಿರಿಗೀ ಬಂದಿರಿ? ಮತ್ತ ಜಾಸ್ತಿ ರೂಪಾಯಿ ಬೇಕಾಗಿದಾವ ಏನ್?''

''ಇಲ್ಲ ಮಹಾರಾಯರಾ! ನಿನ್ನ ರೂಪಾಯಿಗಳನ್ನೇ ತಿರುಗಿ ಮುಟ್ಟಿಸಲಿಕ್ಕೆ ಬಂದಿದ್ದೇವೆ ''

''ರುಪಿಯಾ ತಿರಗೀ ಕೊಡತೀರಿ? ಕೆಲಸಾ ಆತ ಏನ್? ಠೀಕ ಐತಿ, ತಗಿ ಎಷ್ಟದಾವ ರುಪಿಯಾ?''

ಸದಾಶಿವನು ಹದಿನೆಂಟು ರೂಪಾಯಿ, ಹನ್ನೊಂದು ಆಣೆಗಳನ್ನು ಅವನ ಮುಂದಿಟ್ಟನು. ಅದನ್ನು ನೋಡಿ ಮಾರವಾಡಿಯು: “ಇನ್ನೂ ಹಿಂದು ರುಪಿಯಾ, ಐದಾನೆ ಬೇಕ” ಎಂದನು.

“ಹಿಂದು ರೂಪಾಯಿ ಐದು ಆಣೆ ಅದ್ಯಾತರದು? ಅದನ್ನಂತೂ ನೀವು ಮೊದಲೇ ಮುರಿದುಕೊಂಡಿರುವಿರಿ.”

“ಅದೂ ನಾವ್ ಬಡ್ಡೀದು ಮುರಕೊಂಡೇವ. ಪನ್ ಈಗ ಮುದ್ದಲ ಇಪ್ಪತ್ತು ರುಪಿಯಾ ಕೊಡಾಕ ಬೇಕ.”

“ಎಲಾ ಇವನ, ಇನ್ನೂ ನಿನ್ನ ಕಡೆಯಿಂದ ಹಿಯ್ದು ರೂಪಾಯಿಯ ಗಂಟು ಸಹ ಬಿಚ್ಚಿಲ್ಲ. ಹಾಗೆಯೇ ತಿರುಗಿ ತಂದುಕೊಡ ಬಂದಿರುವೆವು ಹೀಗಿದ್ದು ಇಷ್ಟರಲ್ಲಿ ನಿನಗೆ ಬಡ್ಡೀ ಹ್ಯಾಗೆ ಕೊಡಬೇಕು? ಬೇಕಾದರೆ ಟಕೀಟಿಂದು ಹಿಂದಾಣೆಯನ್ನು ಕೊಡುವೆನು.”

“ಅದ ಹ್ಯಾಂಗ ನಡೆದೀತ! ಬಡ್ಡಿ ಸನಗ ಸಿಗಾಕಬೇಕ್. ಹೀಂಗೆ ಜರ್ ನಾವ ಧಂದಾ ಮಾಡಿದ್ರ ಹೊಟ್ಟೆಗೇನ ತಿನಬೇಕ್?”

ಬೇಕಾದಷ್ಟು ತಿಳಿಸಿ ಹೇಳಿ ಕಿಬಿ ಕಿಬಿ ಹಿದ್ದಾಡಿದರೂ ಮಾರವಾಡಿಯು ತನ್ನ ಹಟವನ್ನು ಬಿಡಲಿಲ್ಲ ಕಡೆಗೆ ಅವನ ಪಾಲಿಗೆ ಇಪ್ಪತ್ತು ರೂಪಾಯಿಗಳನ್ನು ಬಡಿಯುಲೇ ಬೇಕಾಯಿತು.

---

## ೧೦ನೆಯ ಪ್ರಕರಣ.

# ಹಲವು ಉಪಯುಕ್ತ ಸಂಗತಿಗಳು.

ಆ ದಿವಸ ರಾತ್ರಿ ನೆರೆಮನೆಯ ದುರ್ಗಾಬಾಯಿಯು ಸಾವಿತ್ರಿಗೆ ಹಿಲೆ ಹೊತ್ತಿಸಗೊಡಲಿಲ್ಲ ಸಾವಿತ್ರಿ ಮತ್ತು ಸದಾಶಿವ ಇವರಿಬ್ಬರನ್ನೂ ತನ್ನ ಮನೆಗೇ ಊಟಕ್ಕೆ ಕರಕೊಂಡು ಹೋದಳು;

ಮತ್ತು ಬಾಣಂತಿಗೂ, ಭಾಗೀರಥಿದೇವಿಗೂ ಅವರ ಮನೆಗೇ ಒಡಿಸಿ ಕೊಂಡು ಹೋಗಿ ಊಟಕ್ಕೆ ಹಾಕಿದಳು ಊಟವಾದ ಕೂಡಲೆ ಸದಾಶಿವನು ತನ್ನ ಬೀಗನಿಗೆ ಎಲ್ಲ ಸಂಗತಿಗಳನ್ನು ಕುರಿತು ವಿಸ್ತೃತ ವಾದ ಪತ್ರವನ್ನು ಬರೆದನು ರಾತ್ರಿ ಮಲಗುವವರೆಗೆ ಆ ತಾಯಿ ಮಕ್ಕಳ ಮುಖ್ಯ ವಿಷಯವೆಂದರೆ, ಡಾಕ್ಟರ ಮತ್ತು ನರ್ಸ ಇವ ರದೇ ಆಗಿತ್ತು.

ಮರುದಿನ ಎಂಟು ಗಂಟೆಗೆ ಸದಾಶಿವನು ಡಾಕ್ಟರರ ದವಾ ಖಾನೆಯ ಕಡೆಗೆ ಹೊರಟನು. ಅಲ್ಲಿಗೆ ಮುಟ್ಟುವ ವರೆಗೆ ಅವನ ಮನಸ್ಸಿನಲ್ಲಿ ನಿನ್ನಿನ ದಿವಸವನ್ನು ಹೇಗೆ ಕಳೆದೆವೆಂಬ ಸಂಗತಿಯು ಹೊರ್ತು ಬೇರೆ ಯಾವ ವಿಚಾರವೂ ಬಂದಿದ್ದಿಲ್ಲ. ಅವನು ದವಾ ಖಾನೆಗೆ ಹೋದಾಗ ಡಾಕ್ಟರರು ಬೇರೆ ರೋಗಿಗಳ ಪರೀಕ್ಷೆ ಮಾಡು ವದರಲ್ಲಿ ತೊಡಗಿದ್ದರು. ಸದಾಶಿವನು ಬಂದ ಕೂಡಲೆ ಡಾಕ್ಟರರು ಅವನನ್ನು ಕರೆದು ತಮ್ಮ ಹತ್ತರ ಖುರ್ಚಿಯ ಮೇಲೆ ಕುಳ್ಳಿರಿಸಿ ಕೊಂಡರು ರೋಗಿಗಳನ್ನೆಲ್ಲ ನೋಡಿದ ಮೇಲೆ ಡಾ. ಸಾಹೇಬರು ಸದಾಶಿವನ ಕಡೆಗೆ ಹೊರಳಿದರು; ಮತ್ತು ಅವನ ಬಾಯಿಂದ ಅವರ ಮನೆತನದ ವಿಷಯದ ಎಲ್ಲ ಸಂಗತಿಯನ್ನೂ ತಿಳಿದುಕೊಂ ಡರು ಸದಾಶಿವನು ತಾನು ಸಣ್ಣವನಿದ್ದಾಗ ತನ್ನ ತಂದೆಯು ಆತ್ಮಹತ್ಯೆ ಮಾಡಿಕೊಂಡ ಸಂಗತಿಯನ್ನು ಮೊದಲ್ಗೊಂಡು ತನ್ನ ಚಿಕ್ಕ ತಂಗಿಯ ಅಪಘಾತ ಮೊದಲಾದ ಪ್ರಸಂಗ ಸಹಿತವಾಗಿ ಪ್ರತಿಯೊಂದು ಮುಖ್ಯ ಸಂಗತಿಯನ್ನೂ ಡಾ. ಸಾಹೇಬರಿಗೆ ಹೇಳಿ ದನು. ಆ ಸಂಗತಿಯನ್ನು ಕೇಳಿ ಕಲ್ಲೆದೆಯುವನ ಮನಸ್ಸು ಕೂಡಾ ಕರಗುವಂತಿತ್ತು; ಅಂದಮೇಲೆ ಕೋಮಲ ಅಂತಃಕರಣದ ಡಾ. ಸಾಹೇಬರ ಮನಸ್ಸು ಕರಗುವದೇನಾಶ್ಚರ್ಯ? ಡಾ. ಸಾಹೇಬರು ಕೆಲಹೊತ್ತಿನ ವರೆಗೆ ವಿಚಾರ ಮಾಡಿ: –

“ಸದಾಶಿವಾ, ನಿಮ್ಮ ಮನೆತನದ ಸಂಗತಿಯನ್ನು ಕೇಳಿ ನನಗೆ ಬಹಳ ವಿಷಾದವೆನಿಸುತ್ತದೆ. ನಿಮ್ಮ ಜನನಿಯು ಇದು ವರೆಗೆ ಅತಿ ದುಃಖದಲ್ಲಿ ದಿವಸ ನೂಕಿದಳೆಂಬದರಲ್ಲೇನೂ ಸಂಶಯ ವಿಲ್ಲ; ಆದರೆ ದುಃಖದ ಹಿಂದೆಯೇ ಸುಖವೂ ಬರುವದೆಂಬ ಸಂಗತಿ ಯನ್ನು ಮರೆಯಬೇಡ. ಇವತ್ತಿಲ್ಲದಿದ್ದರೂ ಕೆಲಕಾಲದ ಮೇಲಾ ದರೂ ನಿಮಗೆ ಹಳ್ಳೇ ದಿವಸಗಳು ಬರುವವೆಂಬದನ್ನು ಪೂರಾ ಲಕ್ಷ್ಯದಲ್ಲಿಡು. ಈಶ್ವರ ನಿಯಮದ ಪ್ರಕಾರ ಮನುಷ್ಯನು ಈ ಸುಖ-ದುಃಖಗಳ ದಿವಸಗಳನ್ನು ಅನುಭವಿಸುತ್ತಿರುವನು. ಆ ಸುಖ-ದುಃಖದ ದಿವಸಗಳಲ್ಲಿ ಯಾವ ಮನುಷ್ಯನು ವಿಕಾರವಶನಾ ಗದೆ, ಧರ್ಮದ ಮಾರ್ಗವನ್ನು ಬಿಟ್ಟು ನಡೆಯದೆ, ನೀತಿಯಿಂದಲೇ ತನ್ನ ದಿವಸಗಳನ್ನು ಶಾಂತ ಮನಸ್ಸಿನಿಂದ ಕಳೆಯುವನೋ, ಅಂಥ ವನೇ ದೇವರ ಹಿರೆಗಲ್ಲಿಗೆ ಹತ್ತುವನು. ನಿನ್ನ ಮೇಲೆ ಎಡೆಬಿಡದೆ ಸಂಕಟಗಳು ಬಂದಿವೆ; ಮತ್ತು ನೀನು ಕೆಚ್ಚೆದೆಯಿಂದ ಅವುಗಳಿಗೆ ಎದುರಾಗಿ, ಸದಾಚರಣದಿಂದ ನಡೆದು ಅವುಗಳೊಳಗಿಂದ ಪಾರಾದಿ ಯೆಂದರೆ, ದೇವರು ನಿನಗೆ ಪೂರಾ ಸಹಾಯ ಮಾಡುವನೆಂಬದನ್ನು ನೆನಪಿನಲ್ಲಿಡು ‘ಯಾರು ನನ್ನ ಮೇಲೆ ಪೂರ್ಣ ನಂಬಿಗೆಯನ್ನಿಟ್ಟಿ ರುವರೋ, ಅವರ ಆಪತ್ಕಾಲದಲ್ಲಿ ಅವರನ್ನು ಸಂರಕ್ಷಿಸಲು ನನ್ನ ಬಲಗೈಯು ಸಿದ್ಧವಿರುವದು’ ಎಂದು ಆ ದಯಾಳುವಾದ ದೇವರ ಆಶ್ವಾಸನವಿರುವದು.”

ಡಾ. ಸಾಹೇಬರ ಈ ಪ್ರೇಮಪೂರ್ವಕವಾದ ಉಪದೇಶ ವನ್ನು ಸದಾಶಿವನು ಮನಗೊಟ್ಟು ಕೇಳುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಡಾಕ್ಟರರು ಮತ್ತೆ:—“ನಿಮ್ಮ ತಾಯಿಯ ಸಲುವಾಗಿ ನಿನಗೆ ಹೆಚ್ಚಿಗೆ ಹೊಗೆಬಂಡಿಯ ಬಾಡಿಗೆ ಬೀಳಬಾರದೆಂದು ನಾನು ಎಂಟು ದಿವಸದ ಔಷಧವನ್ನು ಒಮ್ಮೆಲೆ ಕೊಡುತ್ತೇನೆ. ನಾನು

ಕೊಟ್ಟ ಈ ಔಷಧದಿಂದ ನಿಮ್ಮ ಜನನಿಗೆ ನಿಜವಾಗಿ ಗುಣವಾಗು ವದು. ಒಂದುವೇಳೆ ಈ ಔಷಧದಿಂದ ನಿನ್ನ ತಾಯಿಗೆ ಹೆಚ್ಚಿಗೆ ಮೂರ್ಛೆ ಬಂದರೆ ಇಲ್ಲವೆ ಹೆಚ್ಚಿಗೆ ವಾಂತಿಯಾದರೆ ಒಂದು ದಿವಸ ಔಷಧ ಕೊಡುವದನ್ನು ಬಿಡು.''

''ಡಾ. ಸಾಹೇಬರೇ ನಮ್ಮ ತಾಯಿಯು ಈ ಬೇನೆಯಿಂದ ಬದುಕಿ ಪಾರಾಗಬಹುದೇ?''

''ಪಾರಾಗದೇನು ಮಾಡ್ಯಾರು? ನೀನು ಎಳ್ಳಷ್ಟಾದರೂ ಅಂಜುವ ಕಾರಣವಿಲ್ಲ ಇಂಥ ಅನೇಕ ರೋಗಿಗಳು ನೆಟ್ಟಗಾಗಿರು ವರು ''

ಸದಾಶಿವನು ಮನೆಗೆ ಬಂದ ಮೇಲೆ ತನ್ನ ಸ್ನಾನ-ಸಂಧ್ಯಾ ವಂದನಾದಿಗಳನ್ನು ತೀರಿಸಿಕೊಂಡು, ತನ್ನ ಅಕ್ಕನ ಸಲುವಾಗಿ ನೆರೆ ಮನೆಯಿಂದ ಒಂದು ಹೊರಸನ್ನು ತಂದನು; ಮತ್ತು ನರ್ಸಳು ಹೇಳಿದ ಮೇರೆಗೆ ತನ್ನ ತಾಯಿಯ ಹಾಗು ಅಕ್ಕನ ಹೊರಸುಗಳ ನಡುವೆ ಒಂದು ಪರದೆಯನ್ನು ಇಳಿಬಿಟ್ಟನು. ನೆರೆಮನೆಯ ದುರ್ಗಾ ಬಾಯಿಯು ನರ್ಸಳ ಹೇಳಿಕೆಯ ಮೇರೆಗೆ ಕೂಸು-ಬಾಣಂತಿಗೆ ಎಣ್ಣೆ ಹಚ್ಚಿ ಎರೆಯೋಣ, ಕಾಸೋಣ ಮೊದಲಾದ ಕೆಲಸಗಳನ್ನು ತಾನೇ ಮಾಡತೊಡಗಿದಳು ಸಾವಿತ್ರಿಯಾದರೂ ಒಳ್ಳೇ ಹುರುಪಿನಿಂದ ತನ್ನ ಅಕ್ಕನ ಕೆಲಸವನ್ನೆಲ್ಲ ಮಾಡಹತ್ತಿದಳು ಈ ಮೇರೆಗೆ ಸಂ ಜೆಯ ವರೆಗೆ ಆ ಸಣ್ಣ ಕುಟುಂಬದ ಕಾಲವು ಒಳ್ಳೇ ಆನಂದದಲ್ಲಿ ಹೋಯಿತು. ಭಾಗೀರಥಿದೇವಿಯಾದರೂ ಡಾ. ಸಾಹೇಬರ ಮೇಲೆ ಪೂರ್ಣ ವಿಶ್ವಾಸವನ್ನಿಟ್ಟು ಔಷಧ ಸೇವನೆ ಮಾಡಿದಳು. ತನಗೆ ನೆಟ್ಟಗಾದರೆ ಇದೇ ಔಷಧದಿಂದಾಗಬೇಕೆಂದು ಅವಳಿಗೆ ಅದರ ಮೊದಲನೇ 'ಡೋಝು' (ಗುಟುಕು)ಗೇ ಅನಿಸಿತು. ಮಧ್ಯಾ ಹ್ನದ ಊಟವಾದ ಮೇಲೆ ಸದಾಶಿವನೂ, ಸಾವಿತ್ರಿಯೂ ತಮ್ಮ

ಅಕ್ಕನ ಹೆಂಡತಿಯ ಬಳಿಯಲ್ಲಿ ಕುಳಿತಿದ್ದರು. ಇಷ್ಟರಲ್ಲಿಯೇ ಒಂದು ವಿಕ್ಟೋರಿಯಾ ಬಂಡಿಯು ಬಂದು ಅವರ ಬಾಗಿಲ ಮುಂದೆ ನಿಂತಿತು; ಮತ್ತು ನರ್ಸ ಮೇರಿಯು ಗಾಡಿಯಿಂದ ಕೆಳಗಿಳಿದಳು. ಅವಳನ್ನು ಕಂಡ ಕೂಡಲೆ ಸಾವಿತ್ರಿಯೂ, ಸದಾಶಿವನೂ ಹೊರಗೆ ಓಡಿ ಬಂದರು. ನರ್ಸಳು ತನ್ನ ಸಂಗಡ ಎಷ್ಟೋ ಸಾಮಾನುಗಳನ್ನು ತಂದಿದ್ದಳು. ಅವಳು ಸದಾಶಿವನಿಗೆ ಅವುಗಳನ್ನು ಒಳಗೆ ಒಯ್ಯ ಲಿಕ್ಕೆ ಹೇಳಿ, ತಾನು ಗಾಡಿಯವನ ಬಾಡಿಗೆಯನ್ನು ಕೊಡಲಿಕ್ಕೆ ನಿಂತಳು. ಬಾಡಿಗೆಯನ್ನು ಕೊಡುವದಾದ ಮೇಲೆ ಒಳಗೆ ಬಂದಳು.

ನರ್ಸಳು ನೆಟ್ಟಗೆ ಕೃಷ್ಣೆಯ ಹತ್ತಿರ ಹೋಗಿ, ಒಂದು ದುಪ್ಪ ಟಿಯ ಮೇಲೆ ಮಲಗಿಸಿದ ಕೂಸಿನ ಕಡೆಗೆ ಹೋದಳು; ಮತ್ತು ಮೆಲ್ಲಗೆ ಅದರ ಕೈಗೆ ಮುದ್ದು ಕೊಟ್ಟು "ಅಹಹಾ! ಎಂಥ ಸುಂದರ ವಾದ ಮೊಗುವಿದು! ಕೃಷ್ಣಾಬಾಯಿ, ನೀವು ನಿಜವಾಗಿ ಭಾಗ್ಯವಂತ ರಿರುವಿರಿ. ಈ ಕೂಸು ಮುಂದೆ ನಿಜವಾಗಿ ಯಶಸ್ವಿಯಾಗುವದು. ಒಳ್ಳೇದು. ಕೃಷ್ಣಾಬಾಯಿ, ಈ ಕೂಸಿಗೆ ಹೆಸರು ಏನೆಂದು ಇಡು ವಿರಿ? ಒಳ್ಳೇ ಮುದ್ದಾದ ಹೆಸರನ್ನು ಇಡಿರಿ."

"ನರ್ಸಬಾಯಿಯವರೇ, ಈ ಕೂಸು ಮುಂದೆ ಯಶಸ್ವಿ ಯಾಗುವದೆಂದು ನಿಮಗೆ ಅನಿಸುವದೇನು?" ಎಂದು ಭಾಗೀರಥಿ ದೇವಿಯು ನಡುವೇ ಕೇಳಿದಳು.

"ಈ ಬಗ್ಗೆ ನಿಮಗೆ ಸಂಶಯವೇಕೆ?"

"ಒಳ್ಳೇದು, ಯಶಸ್ವಿಯಾದರೆ ಇವನ ಹೆಸರನ್ನು 'ಯಶವಂತ' ನೆಂದೇ ಇಡೋಣ. ಯಶವಂತನೆಂದರೆ ಯಶಸ್ಸು ಕೊಡುವವನು ಎಂದು ಅರ್ಥವಾಗುವದಿಲ್ಲವೆ"? ಎಂದು ಕೃಷ್ಣೆಯು ಕೇಳಿದಳು. ಇದಕ್ಕೆ ಭಾಗೀರಥಿದೇವಿಯು, "ಹೌದು; ಆದರೆ ನರ್ಸಬಾಯಿಯವರೇ, ನೀವು ಇಷ್ಟು ಸಾಮಾನುಗಳನ್ನು ಏತಕ್ಕೆ ತಂದಿರಿ?" ಎಂದು ಕೇಳಿದಳು,

ಇವುಗಳನ್ನು ನನ್ನ ಪುಟ್ಟ ಯಶವಂತನ ಸಲುವಾಗಿಯೂ, ಅವನ ತಾಯಿಯ ಸಲುವಾಗಿಯೂ ತಂದಿರುವೆನು. ಹೀಗೆಂದು ನರ್ಸಳು ಆ ಸಾಮಾನಿನ ಗಂಟನ್ನು ತನ್ನ ಹತ್ತಿರ ತರಿಸಿಕೊಂಡಳು. ಯಶವಂತನಿಗೆಂದು ತಂದ ಸಾಮಾನುಗಳಲ್ಲಿ ಒಂದು ಸಣ್ಣ ಗಾಡಿಯೂ, ಕಕಲಾತಿಯೂ, ಸ್ವಚ್ಛವಾದ ಅರಿವೆಗಳೂ, ಎರಡು ಮೇಣಗವುಟಿನ ಅರಿವೆಯ ತುಂಡುಗಳೂ, ಬೆಚ್ಚಗಿನ ಉಣ್ಣೆಯ ೩-೪ ವಾಲೆಯ ಕಿವಿಟೊಪ್ಪಿಗೆಗಳೂ ಮತ್ತು ನಾಲ್ಕಾರು ಉಣ್ಣೆಯ ಸಣ್ಣ ಅಂಗಿಗಳೂ ಕಾಲಚೀಲ ಮೊದಲಾದ ಸಾಮಾನುಗಳೂ ಇದ್ದವು; ಮತ್ತು ಕೃಷ್ಣೆಯ ಸಲುವಾಗಿ ಉಟ್ಟುಕೊಳ್ಳಲಿಕ್ಕೆ ತೆಳುವಾದ ಬಿಳಿಯ ಬಣ್ಣದ ಎರಡು ಚೀಟುಗಳು, ಬೆಚ್ಚಗಿನ ಉಣ್ಣೆಯ ಎರಡು ಕುಪ್ಪಸಗಳು, ಸಣ್ಣ ಕರವಸ್ತ್ರ, ಔಷಧದ ಒಂದೆರಡು ಬಾಟ್ಲಿಗಳು ಮತ್ತು ಕೂಸಿಗೆ ಹಾಲು ಹಾಕುವ ಶೀಶೆ, ಸಾಬಾಣಗಳ ಡಬ್ಬಿ ಮೊದಲಾದ ಸಾಮಾನುಗಳು ಇದ್ದವು ಈ ಎಲ್ಲ ಸಾಮಾನುಗಳನ್ನು ನೋಡಿ ಭಾಗೀರಥಿದೇವಿಯ ಕಣ್ಣುಗಳು ಕೃತಜ್ಞಪೂರ್ಣ ಅಶ್ರುಗಳಿಂದ ತುಂಬಿದವು. ಅವಳ ಅಂತಃಕರಣವೂ ತುಂಬಿ ಬಂದಂತಾಗಿ ಅವಳ ಬಾಯಿಯಿಂದ ಶಬ್ದಗಳೇ ಹೊರಡದಂತಾದವು.

ಭಾಗೀರಥಿದೇವಿಯ ಮನಸ್ಸಿನ ಸ್ಥಿತಿಯು ಹೀಗಾಗುವದರಲ್ಲೇನೂ ಆಶ್ಚರ್ಯವಿಲ್ಲ ಪಾಶ್ಚಿಮಾತ್ಯರ ಕೆಲವು ಕೃತಿಗಳ ವಿಷಯವಾಗಿ ನಾವು ಅವರನ್ನು ದೂಷಿಸಬಹುದಾದರೂ, ಅವರಲ್ಲಿದ್ದ ಗುಣಗ್ರಾಹಕತೆಯ ವಿಷಯವಾಗಿ ನಾವು ಎಂದಿಗೂ ಶಂಕಿಸಕೂಡದು. ಮೇಲಿನ ಉದಾಹರಣೆಯ ಮೇಲಿಂದ, ಅವರಲ್ಲಿ ವಿಲಕ್ಷಣವಾದ ಭೂತದಯೆಯಿಂದ ಕೂಡಿದ ಕೆಲವರಿರುವರೆಂಬದನ್ನು ನಮ್ಮ ವಾಚಕರು ಮನಗಾಣಬಹುದು. ಐದನೆಯ ಪ್ರಕರಣದಲ್ಲಿಯ ಒಬ್ಬ ದೇಶೀಯ ಮಿಡ್‌ವಾಯಿಫಳ ಬಾಯಿಯಿಂದ

ಹೊರಟ ಮುಕ್ತಾಫಲಗಳಿಗೂ, ನರ್ಸ ಮೇರಿಯ ಕೃತಿಗೂ ನಮ್ಮ ವಾಚಕರು ಸರಿಹೋಲಿಸಿ ನೋಡಬಹುದು ನಮ್ಮ ಜನರಲ್ಲಿ ಕೆಲ ಮೂರ್ಖರಿರುವಂತೆ, ಆ ಜನರಲ್ಲಿಯೂ ಇರುವರು ಊರು ಇದ್ದಲ್ಲಿ ಹೊಲೆಗೇರಿ ಇದ್ದೇ ಇರುವದು.

ನರ್ಸ ಮೇರಿಯ ು ಕೂಸಿನ ಕಡೆಗೆ ನೋಡಿ, ಅದನ್ನು ಎತ್ತಿಕೊಂಡು ಮೆಲ್ಲಗೆ ಮೈಮೇಲೆ ಕೈಯಾಡಿಸಿ:—"ಕೃಷ್ಣಾಬಾಯಿ, ಕೂಸಿನ ಮೈಯು ಇಷ್ಟೇಕೆ ಎಣ್ಣೆಯಿಂದ ಜಿಗಿಜಿಗಿಯಾಗಿದೆ? ಇದು ನೆಟ್ಟಗಲ್ಲ ಸಾಬಾಣ ಹಚ್ಚಿ ಸ್ವಚ್ಛವಾಗಿ ಎರೆಯುತಕ್ಕದ್ದು. ನಾನು ಇಲ್ಲಿ ಇಟ್ಟು ಹೋದ 'ಬೊರಾಸಿಕ್ ಲೋಶನ್'ದ ಉಪಯೋಗವನ್ನು ಮಾಡುತ್ತ ಹೋಗಿರಿ; ಮತ್ತು ನಿಮಗೆ ಎಣ್ಣೆಯ ಉಪಯೋಗವನ್ನೇ ಮಾಡುವದಿದ್ದರೆ, ಈ ಎಣ್ಣೆಯನ್ನು ಹಚ್ಚಬೇಡಿರಿ. ಹಿಂದು ಸ್ವಲ್ಪ 'ಕಾಡಲಿವ್ಹರ್ ಆಯಿಲ್' ತೆಗೆದುಕೊಂಡು ಅದನ್ನು ಕೂಸಿನ ಹೊಟ್ಟೆಗೆ ಹಚ್ಚಿ ಚನ್ನಾಗಿ ತಿಕ್ಕಿ ತಿಕ್ಕಿ ಎರೆಯಿರಿ; ಅಂದರೆ ಇಬ್ಬಗೆಯಾಗಿ ಹಿತಿತಾಗುವದು ನಿಮ್ಮ ಜನರಲ್ಲಿ ಶಿಶುಸಂಗೋಪನವು ಯೋಗ್ಯವಾಗಿ ಆಗದಿರುವದರಿಂದಲೇ ಹುಡುಗರು ಇಷ್ಟು ರೋಗಿಗಳೂ, ಅಶಕ್ತರೂ, ಗಿಡ್ಡರೂ ಆಗಿರುತ್ತಾರೆ."

"ಹೌದು, ಹೀಗಾಗಲು ಕಾರಣವೇನು?"

"ಇದಕ್ಕೆ ಕಾರಣಗಳು ಅನೇಕವಿರುವವು. ಅವುಗಳಲ್ಲಿ ಮುಖ್ಯವಾದದ್ದೆಂದರೆ ಬಡತನವು. ಅದರಿಂದ ಅವರಿಗೆ ಇರಲಿಕ್ಕೆ ಸ್ವಚ್ಛ ಮತ್ತು ಹವೆಯಾಡುವ ಮನೆಯೂ ಅರಿವೆ-ಅಂಚಡಿಗಳ ಮತ್ತು ಚಲೋ ಆಹಾರದ ಕೊರತೆಗಳೂ ಬಹಳವಿರುತ್ತವೆ. ಆದರೂ ಇದ್ದದರಲ್ಲಿಯೇ ತಾಯಿಯು ತನ್ನ ಕೂಸಿನ ಆರೈಕೆಯನ್ನು ಮಾಡಲಿಕ್ಕೇ ಬೇಕು; ಯಾಕೆಂದರೆ ಹುಡುಗರ ಜ್ಞಾನೇಂದ್ರಿಯಗಳು ಅತಿ ಸೂಕ್ಷ್ಮವಿರುವದರಿಂದ, ಅತ್ಯಲ್ಪ ಕಾರಣದಿಂದಲೇ ಅವರಿಗೆ ಅನೇಕ

ವಿಕಾರಗಳಾಗುತ್ತವೆ ಅನ್ನಾಶಯದಲ್ಲಿ ಇಲ್ಲವೆ ಪಚನಕ್ರಿಯೆಯಲ್ಲಿ ಸ್ವಲ್ಪ ಹೆಚ್ಚು-ಕಡಿಮೆಯಾದರೂ ಕೂಡ ಬಹಳೇ ಜ್ವರ ಬರುತ್ತವೆ. ಶ್ವಾಸೋಚ್ಛ್ವಾಸವು ಹೆಚ್ಚಾಗಿ ಕೆಮ್ಮು ಬಂದು ಅತಿ ತ್ರಾಸವಾಗ ಹತ್ತುತ್ತದೆ. ಕೂಸುಗಳಿಗೆ ಥಂಡಿಯಾದರೂ ತೀವ್ರವೇ ಆಗುತ್ತದೆ. ಹವೆಯಲ್ಲಿ ತಂಪು ಸ್ವಲ್ಪ ಹೆಚ್ಚಾದ ಕೂಡಲೆ ಅವುಗಳ ಪ್ರಕೃತಿಯಲ್ಲಿ ಹೆಚ್ಚು ಕಡಿಮೆಯಾಗುವದು. ಇದರ ದೆಸೆಯಿಂದ ಅವುಗಳ ಕೋಣೆಯಲ್ಲಿ ಸ್ವಚ್ಛವಾದ ಮತ್ತು ಬೆಚ್ಚಗಿನ ಹವೆಯಾಡುತ್ತಿರಲಿಕ್ಕೆ ಬೇಕು. ಅವುಗಳ ಮೈಯಲ್ಲಿ ತೆಳುವಾದ ಸೈಲಾದ ಉಣ್ಣೆಯ ಅರಿವೆಗಳನ್ನು ಹಾಕಬೇಕು; ಮತ್ತು ಕೂಸನ್ನು ಕೋಣೆಯ ಹೊರಗೆ ಒಯ್ಯಬೇಕಾದರೆ ಅದರ ಕಾಲುಗಳಲ್ಲಿ ಕಾಲುಚೀಲ ಇರಲಿಕ್ಕೆ ಬೇಕು.''

''ಆದರೆ ನರ್ಸ ಬಾಯಿಯವರೇ ಕೂಸಿಗೆ ಏನಾದರೂ ತ್ರಾಸವಾಗುತ್ತಿದ್ದರೆ ಅದನ್ನು ಹೇಗೆ ಅರಿತುಕೊಳ್ಳಬೇಕು?''

''ಕೂಸುಗಳಿಗೆ ಎಲ್ಲಿಯಾದರೂ ನೋಯುತ್ತಿದ್ದರೆ ಇಲ್ಲವೆ ಹಸಿವೆಯಾಗಿದ್ದರೆ ಅವುಗಳು ಅಳಹತ್ತುವವು. ಇದರ ದೆಸೆಯಿಂದ ಕೂಸಿನ ಅಳುವುದರ ವಿಷಯಕ್ಕೆ ತಾಯಿಗೆ ಚನ್ನಾಗಿ ಗೊತ್ತಿರುವದು ಅವಶ್ಯವಾಗಿದೆ. ಕೂಸಿಗೆ ಹಸಿವೆಯಾದ ಕೂಡಲೆ, ಅದು ತನ್ನ ಮುಷ್ಟಿಗಳನ್ನು ಗಟ್ಟಿಯಾಗಿ ಹಿಡಿದು, ಕೈಕಾಲು ಝಾಡಿಸುತ್ತ ಅಳಹತ್ತುವದು. ಕೂಸಿನ ಹೊಟ್ಟೆಯಲ್ಲಿ ಶೂಲೆಗಳೆದ್ದರೆ ಅದು ತನ್ನ ಮೈಯನ್ನು ಅತ್ತಿತ್ತ ಅಲ್ಲಾಡಿಸುತ್ತ ಅಳಲಾರಂಭಿಸುವದು. ಎಲ್ಲ ಕೂಸುಗಳ ಮೈ ಬಣ್ಣವು ಸಾಧಾರಣವಾಗಿ ಸ್ವಚ್ಛವಾದದ್ದೂ, ಕಂದೀಬಣ್ಣದ್ದೂ ಇರುವದು; ಮತ್ತು ಅವುಗಳ ಮುಖಗಳು ಶಾಂತ ಮತ್ತು ಸತೇಜವಿರುವವು; ಆದರೆ ಒಂದುವೇಳೆ ಅವುಗಳ ಮೈ ಬಣ್ಣವು ಬಾಡಿದರೆ ಇಲ್ಲವೆ ಮೋರೆಯು ಇಳಿದರೆ, ಹುಬ್ಬು ಗಂಟಿಕ್ಕಿ

ಹಣೆಯ ಮೇಲೆ ನೀರಿಗೆಗಳು ಬೀಳ ಹತ್ತಿದರೆ, ಇಲ್ಲವೆ ಕಣ್ಣು ಗಳು ಹಿಳಿಸಿಕ್ಕರೆ ಇವೆಲ್ಲ ಗುರುತುಗಳೂ ಆ ಕೂಸಿಗೆ ಯಾವದಾದ ರೊಂದು ರೋಗವಾಗಿದೆಯೆಂದು ತೋರಿಸುತ್ತವೆ.'' ಹೀಗೆಂದು ನರ್ಸಳು ಆ ಕೂಸನ್ನು ಮೆಲ್ಲಗೆ ಎತ್ತಿಕೊಂಡು, ಅದರ ಅಂಗಿಯನ್ನು ಬಿಚ್ಚಿ ಹೊಕ್ಕಳದ ಹುರಿಯ ಕಡೆಗೆ ನೋಡಿದಳು.

ಈ ಹುರಿಯು ಇನ್ನು ನಾಲ್ಕೈದು ದಿವಸಗಳಲ್ಲಿ ಹಣಗಿ ಉದುರಿ ಬೀಳುವದು; ಆದರೆ ಅಲ್ಲಿಯ ವರೆಗೆ ನೀವು ಇದನ್ನು ಚೆನ್ನಾಗಿ ಪರೀಕ್ಷಿಸಿ, ಸ್ವಚ್ಛವಾಗಿ ಹಸಿಯಾಗದಂತೆ ಇಡತಕ್ಕದ್ದು. ಇದಕ್ಕೆ ಹೊಲಸು ನಾತ ಬರುವದೋ ಹೇಗೆಂದು ನೋಡಬೇಕು. ಹುರಿಯು ಉದುರಿ ಬಿದ್ದ ಕೂಡಲೆ ರಕ್ತ ಸೋರುವದೋ ಹೇಗೆ? ಇಲ್ಲವೆ ಕೀವಾಗಿದೆಯೋ ಹೇಗೆಂಬದನ್ನು ನೋಡಬೇಕು. ಕೂಸು ಅಳುವ ಮುಂದೆ ಹೊಕ್ಕಳವು ಉಬ್ಬುವದರಿಂದ ಅದನ್ನು ತುಸ ಒತ್ತಿ ಹಿಡಿಯಬೇಕು. ಇದರಂತೆಯೇ ಕೂಸುಗಳ ಕಣ್ಣಿನ ವಿಷ ಯುಕ್ಕೂ ಒಳ್ಳೇ ಎಚ್ಚರವನ್ನು ವಹಿಸಬೇಕು. ಅವುಗಳನ್ನು ದಿನಾಲು ರಾತ್ರಿ ಬಿಸಿನೀರಿನಿಂದ ಸ್ವಚ್ಛವಾಗಿ ತೊಳೆದು ರೆಪ್ಪೆಯ ಹೊಟ್ಟೆಯ ಒಳಭಾಗಕ್ಕೆ ಕಾಡಿಗೆ, ಬೆಣ್ಣೆ ಇಲ್ಲವೆ ವ್ಯಾಸ ಲಿನ ಹಚ್ಚುತ್ತಿರಬೇಕು; ಮತ್ತು ಆಯಾ ಭಾಗಗಳನ್ನು ಯಾವಾ ಗಲೂ ನೀರು ಬಡಿಯದಂತೆ ಮತ್ತು ಸ್ವಚ್ಛವಾಗಿರುವಂತೆ ಎಚ್ಚರ ತಕ್ಕೊಳ್ಳಬೇಕು. ಎಷ್ಟೋ ಹೆಂಗಸರು ಈ ಕ್ಷುಲ್ಲಕವೆಂದು ಕಂಡು ಬರುವ ಸಂಗತಿಗಳ ಕಡೆಗೆ ದುರ್ಲಕ್ಷ ಮಾಡುವದರಿಂದ ಮುಂದೆ ನಾನಾ ಬಗೆಯ ಕೆಟ್ಟ ಪರಿಣಾಮಗಳಾಗುತ್ತವೆ.

ಈ ಮೇರೆಗೆ ನರ್ಸ ಮೇರಿಯು ಸಂಜೆಯಾಗುವ ತನಕ ಅಲ್ಲಿಯೇ ಕುಳಿತು, ಕೃಷ್ಣೆಗೆ ಎಷ್ಟೋ ಸಂಗತಿಗಳ ವಿಷಯಕ್ಕೆ ತಿಳಿಸಿ ಹೇಳಿದಳು. ಕೃಷ್ಣೆಯಾದರೂ ತನಗೆ ತಿಳಿಯದ ಸಂಗತಿ

ಗಳನ್ನು ತಿರಿತಿರಿಗಿ ಕೇಳಿ, ತನ್ನ ಎಲ್ಲ ಸಂಶಯಗಳ ಪರಿಹಾರ ಮಾಡಿಕೊಂಡಳು.

"ಹಿಳ್ಳೇದು ಕೃಷ್ಣಾಬಾಯಿ, ಇನ್ನು ಹೋಗಿ ಬರುತ್ತೇನೆ. ಇನ್ನು ಎಂಟು ದಿವಸಗಳ ವರೆಗೆ ನನಗೆ ಇಲ್ಲಿಗೆ ಬರುವದಾಗುವದಿಲ್ಲ. ಯಾಕೆಂದರೆ, ನಾಳಿನಿಂದ ನನಗೆ ಆಸ್ಪತ್ರಿಯು ಹಗಲು ಕೆಲಸ ಮಾಡುವ ಸರತಿಯು ಬರುತ್ತದೆ."

ನರ್ಸ ಮೇರಿಯು ಕೃಷ್ಣೆಯು ಸಂಗಡ ಮಾತಾಡುತ್ತ ಕುಳಿತಾಗ ಸದಾಶಿವನು ಹೊರಗೆ ಹೋಗಿ ಹಾಲು ತಂದು, ಸಾವಿತ್ರಿಯು ಕಡೆಯಿಂದ ಉತ್ತಮವಾದ ಚಹಾ ತಯಾರ ಮಾಡಿಸಿ, ಮೇರಿಯು ಹೊರಗೆ ಹೋಗುವದರೊಳಗಾಗಿ ಒಂದು ಸ್ವಚ್ಛವಾದ ವಾಟಗದಲ್ಲಿ ಚಹವನ್ನು ಹಾಕಿ ಅವಳ ಮುಂದೆ ಒಯ್ದು ಇಟ್ಟನು; ಮತ್ತು 'ನರ್ಸಬಾಯಿಯುವರೇ ನಮ್ಮ ಮನೆಯಲ್ಲಿ ಕಾಜಿನ ಕಪ್, ಬಸಿಗಳಿಲ್ಲ; ಆದ್ದರಿಂದ ಇದರಲ್ಲಿ—'ಇಷ್ಟರಲ್ಲಿಯೇ ನರ್ಸಳು,: "ಇಲ್ಲದಿದ್ದರೆ ಇಲ್ಲ; ಅದರದೇನೂ ಚಿಂತೆ ಮಾಡಬೇಡ."

"ಆದರೆ ಇದರಲ್ಲಿ ಕುಡಿಯುವ ಅಭ್ಯಾಸವಿಲ್ಲದ್ದರಿಂದ ನಿಮಗೆ ಸೊಗಸಾಗಲಿಕ್ಕಿಲ್ಲ."

"ಅದು ಹೇಗೆ? ನನಗೆ ಈ ತರದ ಅಭ್ಯಾಸವಿರುವದು. ಕೆಲಸವಿದ್ದಾಗ್ಗೆ ನಿಂತನಿಂತಲ್ಲಿಯೇ ಊಟವನ್ನು ಸಹ ಮಾಡುವೆನು. ಅಂದಮೇಲೆ ಇದರಿಂದ ನನಗೆ ಸೊಗಸಾಗದೇನು ಮಾಡೀತು! ಹಿಳ್ಳೇದು, ಈ ಚಹವನ್ನು ಯಾರು ಮಾಡಿದರು?"

"ನಮ್ಮ ಚಿಕ್ಕ ತಂಗಿಯಾದ ಸಾವಿತ್ರಿಯು ಮಾಡಿದಳು." ಇಷ್ಟರಲ್ಲಿಯೇ ಸಾವಿತ್ರಿಯೂ ಅಲ್ಲಿಗೆ ಬಂದಳು. ಅವಳನ್ನು ನೋಡಿ ನರ್ಸಳು "ಭಲಾ! ಹುಡಿಗೀ, ಚಹವನ್ನು ಚೆನ್ನಾಗಿ ತಯಾರಿಸಿರುವಿ" ಎಂದು ಅಂದು, "ಇದು ನಿಜವೇ? ಶಭಾಸ್! ಇಷ್ಟು ಚಿಕ್ಕ ವಯಸ್ಸಿ

ಸಲ್ಲಿಯೇ ಇವಳು ಅಡಿಗೆಯನ್ನು ಕೂಡಾ ಮಾಡಬಲ್ಲಳೇ! ಶಾಬಾಸ್! ಶಾಬಾಸ್! ಪರಿಸ್ಥಿತಿಗಾಗಿ ನಿಮ್ಮ ಸಣ್ಣ ಹುಡಿಗಿಗೆ ಇದೊಂದು ಅವಶ್ಯಕ ಕಾರ್ಯವು ಸುಲಭ ರೀತಿಯಿಂದ ಸಾಧ್ಯವಾಗಿರುವದು. ಮುಂದೆ ಸ್ವಲ್ಪ ಹೊತ್ತಿನ ವರೆಗೆ ಮಾತನಾಡಿ ನರ್ಸ ಮೇರಿಯು ತನ್ನ ಮನೆಗೆ ಹೊರಟು ಹೋದಳು.

## ೧೧ನೆಯ ಪ್ರಕರಣ.



## ಹಿತಚಿಂತಕರು.

ನರ್ಸ ಮೇರಿಯು ಬಂದು ಹೋದ ದಿವಸವೇ, ಡಾ. ಸಾಹೇಬರ ದವಾಖಾನೆಯಲ್ಲಿ ಅವರ ಕೇವಲ ಗುರುತಿನವನೊಬ್ಬ ವ್ಯಕ್ತಿಯು ಮಾತನಾಡುತ್ತ ಕುಳಿತಿದ್ದನು ಈ ವ್ಯಕ್ತಿಯೆಂದರೆ ಆ ದಿನದ ಮುನ್ನಿನ ದಿನ ಸದಾಶಿವನನ್ನು ಡಾ ಪಾಯುಸ್‌ರ ಕಡೆಗೆ ಕರಿದುಕೊಂಡು ಹೋದ ಸಾಹೇಬರಾಗಿದ್ದರು. ಅವರ ಹೆಸರು 'ಗುಡ್‌ಉಇಲ್' ಸಾಹೇಬರೆಂದಿತ್ತು. ಅವರು ಇವತ್ತಿನ ದಿವಸ ಸದಾಶಿವನ ವಿಷಯದ ಸಂಗತಿಯನ್ನು ತಿಳಿದುಕೊಳ್ಳಲಿಕ್ಕೆ ಬಂದಿದ್ದರು. ಅವರ ಮಾತು ಕೇಳುವದಕ್ಕಿಂತ ಮೊದಲು ನಾವು ಅವರ ಗುರುತು ಮಾಡಿಕೊಳ್ಳೋಣ; ಅಂದರೆ ಕಥೆಯನ್ನು ಮುಂದೆ ಸಾಗಿಸಲಿಕ್ಕೆ ಸುಲಭವಾಗುವದು.

ಈ ಸಾಹೇಬರು ಮುಂಬಯಿ ಪಟ್ಟಣದೊಳಗಿನ ಅತಿ ಪ್ರಸಿದ್ಧವಾದ 'ಗುಡ್‌ಉಇಲ್' ಎಂಬ ಹೆಸರಿನ ಕಂಪನಿಯ ಯಜಮಾನರಿದ್ದು, ಆ ಕಂಪನಿಯಲ್ಲಿ ಏತದ್ದೇಶಿಯ ೪-೫ ನೂರು ಜನರು ಹೊಟ್ಟೆ

ತುಂಬಿಕೊಳ್ಳುತ್ತಿರುವರು ಬಾಯುಖಳಾದಲ್ಲಿ ಅವರ ದೊಡ್ಡ ಕಾರಖಾನೆ ಇತ್ತು. ಆ ಕಾರಖಾನೆಯಲ್ಲಿ ಕಬ್ಬಿಣದ ಸಣ್ಣ ದೊಡ್ಡ ಯಂತ್ರದ ಸಾಮಾನುಗಳು ತಯಾರಾಗುವವು. ಗುಡ್‌ಉಯಿಲ್ ಸಾಹೇಬರಿಗೆ ಇಬ್ಬರು ಮಕ್ಕಳಿದ್ದು ಅವರು ಈಗ ವಿಲಾಯತಿಗೆ ಶಿಕ್ಷಣದ ಸಲುವಾಗಿ ಹೋಗಿದ್ದರು. ಅವರ ಪತ್ನಿಯು ಈಗ ಎರಡು ತಿಂಗಳುಗಳಿಂದ ಬೇನೆ ಬಿದ್ದಿದ್ದು, ಈಗಂತೂ ಅವಳಿಗೆ ದಮ್ಮಿನ ಉಪದ್ರವವಾಗಿತ್ತು. ಅವಳಿಗೆ ಡಾ. ಪಾಯುಸರೇ ಔಷಧ ಕೊಡುತ್ತಿದ್ದರು ಈಗ ಎಂಟು ದಿವಸಗಳ ಹಿಂದೆ ಗುಡ್‌ಉಯಿಲ್ ಸಾಹೇಬರು ತಮ್ಮ ಕಾರಖಾನೆಯಲ್ಲಿ ಏನೋ ಕೆಲಸ ಮಾಡುತ್ತಿರುವಾಗ ಅವರ ಕೈಗೆ ಜಂಗುತಿಂದ ಕಬ್ಬಿಣದ ತಗಡು ತಗಲಿ, ನಡುಬೆರಳಿನ ಉಗುರು ಕೊಯ್ದು ಹೋಯಿತು. ಸಾಹೇಬರು ಆಗಿಂದಾಗ್ಗೆ ಆ ಬೆರಳಿಗೆ ಒಂದು ಒದ್ದೀ ಅರಿವೆಯನ್ನು ಸುತ್ತಿಕೊಂಡರು; ಆದರೆ ಸ್ವಲ್ಪ ದುರ್ಲಕ್ಷ್ಯ ಮಾಡಿದ ಕಾರಣ ರಾತ್ರಿಯಲ್ಲಿ ಆ ಬೊಟ್ಟು ಬಾತು, ಭುಜದಿಂದ ಬೆರಳಿನ ತನಕ ಚಣಚಣನೆ ಹೊಡೆಯ ಹತ್ತಿತು ಮರುದಿವಸವೇ ಡಾ. ಪಾಯುಸ್‌ರ ಔಷಧೋಪಚಾರವು ನಡೆಯಿತು ಮುಂದೆ ಒಂದು ವಾರದ ಮೇಲೆ ಡಾ. ಸಾಹೇಬರು ಆ ಗಾಯವನ್ನು ಮತ್ತೆ ಪರೀಕ್ಷಿಸಿ ನೋಡಿದಾಗ್ಗೆ ಸ್ವಲ್ಪ ಗಾಬರಿಗೊಂಡಂತೆ ತೋರಿದರು. ಅವರು “ಈ ಬೊಟ್ಟಿಗೆ ಉಗುರು ನಂಜು ಆಗಿರುತ್ತದೆ. ನೀವು ಹೋದ ವಾರದಲ್ಲಿ ನನಗೆ ಬೊಟ್ಟು ತೋರಿಸದೆ ಹೋದದ್ದು ನೆಟ್ಟಗಾಗಲಿಲ್ಲ. ಈ ವಿಷವು ನಿಮ್ಮ ಈ ನಡುಬೆರಳಿನ ಮೊದಲನೇ ಗಣ್ಣಿಗೆ ಪೂರ್ಣ ಭೇದಿಸಿರುವದು. ಈಗ ಈ ಬೊಟ್ಟನ್ನೇ ಕತ್ತರಿಸಿ ತೆಗೆಯದಿದ್ದರೆ, ಆ ವಿಷವು ಮೇಲಕ್ಕೆ ಏರುತ್ತ ಹೋಗಿ ಇಡೀ ಕೈಯನ್ನೇ ಕೊಯ್ಯಬೇಕಾದೀತು” ಡಾ ಸಾಹೇಬರ ಮಾತು ಕೇಳಿ ಗುಡ್‌ಉಯಿಲ್ ಸಾಹೇ

ಬರು ಗಾಬರಿಯಾದರು; ಮತ್ತು “ ಡಾಕ್ಟರಸಾಹೇಬರೇ, ಇವತ್ತಿನ ದಿವಸ ನನ್ನ ಇಡೀ ಕೈ ನೋವಾಗಿದೆ; ಆದರೂ ಅಷ್ಟು ಸಣ್ಣ ಗಾಯದಿಂದ ಈ ವಿಷಬಾಧೆಯು ಹೇಗಾಯಿತು?” ಎಂದರು. “ಆ ಹಳೇ ಅಲಗಿನ-ಜಂಗು ಹಿಡಿದ-ಕತ್ತಿ, ಚಾಕು, ಚೂರಿ ಮೊದಲಾದ ಕಬ್ಬಿಣದ ಸಾಮಾನುಗಳು ಬಹಳ ಘಾತುಕವಿರುತ್ತವೆ. ಇಂಥ ವಸ್ತುಗಳಿರದ ಉಗುರಿನ ಕಣ್ಣಿನ ಹತ್ತರ ತುಸ ಗಾಯವಾಗಿ ಅದರ ದೆಶೆಯಿಂದ ನಾವು ಸಾಕಷ್ಟು ಜಾಗರೂಕರಾಗಿ ಇರದಿದ್ದರೆ ಇಂಥ ಅನರ್ಥಗಳು ಸಂಭವಿಸುತ್ತವೆ. ಮೊನ್ನೆ ನನ್ನ ಕಡೆಗೆ ಇಂಥ ಹಿಂದು ಕೇಸ ಬಂದಿತ್ತು. ನಾವಲಿಗನ ಕಡೆಯಿಂದ ಉಗುರು ತೆಗೆಸುತ್ತಿರುವಾಗ್ಗೆ ಅದು ಸ್ವಲ್ಪ ಹಸಿಗೆ ಹತ್ತಿತ್ತು; ಆದರೆ ಮೊನ್ನೆ ಮತ್ತೆ ಅವನು ಆ ಬೆರಳನ್ನು ತೋರಿಸಲು ಬಂದಾಗ್ಗೆ ಅವನ ಇಡೀ ಬೆರಳಿಗೆ ಉಗುರು ನಂಜಾಗಿ ಹೋಗಿತ್ತು. ಕಟ್ಟ ಕಡೆಗೆ ಆ ಇಡೀ ಬೆರಳನ್ನೇ ಕೊಯ್ದು ತೆಗೆಯಬೇಕಾಯಿತು”.

“ಆದರೆ ನನ್ನ ಬೆರಳಿಗೂ ಉಗುರು ನಂಜಾಗಿರುವದೆಂದು ನಿಮಗೆ ತೋರಿರುವದೇನು?”

“ಹೌದು.”

ಅದರ ಮರುದಿವಸವೇ ಅಂದರೆ, ನಾವು ಯಾವ ದಿವಸದ ಸಂಗತಿಯನ್ನು ಬರೆಯುತ್ತಿರುವೆವೋ ಇದರ ಹಿಂದಿನ ದಿವಸ ಗುಡ್‌ಉಯಿಲ್ ಸಾಹೇಬರು ಡಾ. ಪಾಯಿಸ್‌ರು ಹೇಳಿದ ಸಂಗತಿಯ ವಿಷಯವಾಗಿ ತಮ್ಮ ಮನಸ್ಸಿಗೆ ಖಾತ್ರಿ ಮಾಡಿಕೊಳ್ಳುವದಕ್ಕಾಗಿ ಆ ಬೆರಳನ್ನು ಬೇರೆ ಇಬ್ಬರು ಹೆಸರಾದ ಡಾಕ್ಟರರಿಗೆ ತೋರಿಸಲಿಕ್ಕೆ ಹೋಗಿದ್ದರು. ರಾಜೆ ಡಾಕ್ಟರರ ದವಾಖಾನೆಗಾದರೂ ಅವರು ಇದೇ ಉದ್ದೇಶದಿಂದಲೇ ಹೋಗಿದ್ದರು. ಅಲ್ಲಿ ಗುಡ್‌ಉಯಿಲ್ ಸಾಹೇಬರು ಕುಳಿತಾಗ್ಗೆ ಸದಾಶಿವನೂ ಬಂದನು. ಆ ಮೇಲೆ

ಹಿದಗಿದ ಎಲ್ಲ ಸಂಗತಿಯು ವಾಚಕರಿಗೆ ಗೊತ್ತೇ ಇರುವದು. ಇವ ತ್ತಿನ ದಿವಸ ಅವರು ಡಾ. ಪಾಯುಸ್‌ರ ಕಡೆಗೆ ಎರಡು ಉದ್ದೇಶಗಳ ದೆಶೆಯಿಂದ ಬಂದಿದ್ದರು. ಇದರೊಳಗಿನ ಮೊದಲನೆಯ ಹೇತು ವೆಂದರೆ ತಮ್ಮ ಬೊಟ್ಟಿಗೆ ಶಸ್ತ್ರಕ್ರಿಯೆಯನ್ನು ಮಾಡಿಸಿ ಅದನ್ನು ಕೊಯ್ಯಿಸುವದು; ಮತ್ತು ಎರಡನೆಯದೆಂದರೆ, ಸದಾಶಿವನ ವಿಷಯವಾಗಿ ಮುಂದಿನ ಸಂಗತಿಯನ್ನು ಕೇಳುವದು.

"ನಾನು ಡಾ ರಾಜೇಯವರ 'ಕನ್ಸಲ್ಟಿಂಗರೂಮಿ' (ರೋಗದ ವಿಷಯಕ ಅಭಿಪ್ರಾಯವನ್ನು ಕೇಳುವ ಕೋಣೆ)ನಲ್ಲಿ ಕುಳಿತಾಗ ಆ ಹುಡುಗನು ಒಮ್ಮಿಂದೊಮ್ಮೆ ಒಳಗೆ ಬಂದನು. ಆಗ ಅವನ ಮುಖಮುದ್ರೆಯು ಭಯಭೀತವಾದಂತೆ ತೋರುತ್ತಿತ್ತು; ಮತ್ತು ಅವನು ಒಳಗೆ ಕಾಲಿಟ್ಟ ಕೂಡಲೆ ನೆಟ್ಟಗೆ ಡಾಕ್ಟರರ ಎದುರಿಗೇ ಹೋಗಿ ನಿಂತನು" ಎಂದು ಗುಡ್‌ಉಯಿಲ್ ಸಾಹೇಬರು ಹೇಳಿದರು

ಇದನ್ನು ಕೇಳಿ ಡಾ. ಪಾಯುಸ್‌ರು "ನೀವು ಡಾ. ರಾಜೆಯ ವರ ಕಡೆಗೆ ಯಾಕೆ ಹೋಗಿದ್ದಿರಿ?" ಎಂದು ಕೇಳಿದರು.

"ನಾನು ಈ ಬೆರಳನ್ನು ತೋರಿಸಬೇಕೆಂದು ಹೋಗಿದ್ದೆನು."

"ಹಾಗಾದರೆ ಅವರು ಏನು ಹೇಳಿದರು?"

"ಛೇ! ನಾನು ಡಾಕ್ಟರರಿಗೆ ಭೆಟ್ಟಿಯಾಗಲೇ ಇಲ್ಲ; ಮತ್ತು ಸದಾಶಿವನನ್ನು ಇಲ್ಲಿಗೆ ಕರೆದುಕೊಂಡು ಬಂದ ಮೇಲಾದರೂ ನಾನು ತಿರಿಗಿ ಅಲ್ಲಿಗೆ ಹೋಗಲಿಲ್ಲ; ಆದರೆ ಡಾ. ಸಾಹೇಬರೇ, ನೀವು ನಿನ್ನೆ ಅವನ ಸಂಗಡ ದಾದರಕ್ಕೆ ಹೋಗಿದ್ದಿರಿ. ಅಲ್ಲಿ ಏನೇನು ಸಂಭವಿ ಸಿತು? ಅದನ್ನು ಕೇಳಬೇಕೆಂದು ನನ್ನ ಮನಸ್ಸು ಹರಿಯುತ್ತದೆ."

ಡಾ ಸಾಹೇಬರು ಕೃಷ್ಣೆಯ ಬಾಣಂತಿತನದ ವಿಷಯದ ಸಂಗತಿಗಳನ್ನು ಒಂದೂ ಬಿಡದಂತೆ ಹೇಳಿದರು ಸದಾಶಿವನು ತನ್ನ

ಫೀ ಹಣವನ್ನು ಕೂಡಿಸಬೇಕಾದರೆ ಯಾವ ಪ್ರಯತ್ನಗಳನ್ನು ಮಾಡ ಬೇಕಾಯಿತೆಂಬದನ್ನೂ ಸವಿಸ್ತಾರವಾಗಿ ಹೇಳಿ, ಮುಂದೆ ಅವರು ಮಿಷ್ಟರ ಗುಡ್‌ಉಯಿಲ್, ಇವತ್ತೇ ಮುಂಜಾನೆ ಸದಾಶಿವನು ತಮ್ಮ ತಾಯಿಗೆ ಔಷಧವನ್ನು ಒಯ್ಯಲಿಕ್ಕೆ ಬಂದಿದ್ದನು. ಆಗ ಅವನು ತಮ್ಮ ಸಂಸಾರದ ವಿಷಯವಾಗಿ ಬುಡ್ಡಿಯಿಂದ ತುದಿ ತನಕ ಎಲ್ಲ ಸಂಗತಿಗಳನ್ನು ಹೇಳಿದನು.

ಅವನು ಆರು ವರ್ಷದ ಚಿಕ್ಕಬಾಲಕನಿದ್ದಾಗ ಅವನ ತಂದೆಯು ತನ್ನ ಬಡತನಕ್ಕೆ ಬೇಸತ್ತು ಆತ್ಮಹತ್ಯೆ ಮಾಡಿಕೊಂಡನಂತೆ! ಆಗ ಅವರ ತಾಯಿಯು ಹನ್ನೆರಡು ದಿವಸಗಳ ಬಾಣಂತಿ ಇದ್ದಳು ಅವರ ಅಪ್ಪನು ಆತ್ಮಹತ್ಯೆ ಮಾಡಿಕೊಂಡ ದಿವಸವೇ ಅವರ ಮನೆಯಲ್ಲಿ ಮತ್ತೊಂದು ಹೃದಯದ್ರಾವಕವಾದ ಪ್ರಸಂಗವು ಒದಗಿತು. ಆ ಹುಡುಗರು ಅಂದಿನ ರಾತ್ರಿ ಮಲಗಿ ನಿದ್ರೆ ಮಾಡುತ್ತಿದ್ದಾಗ ಅಲ್ಲಿಯೇ ಹತ್ತಿರದಲ್ಲಿಟ್ಟ ತೊಟ್ಟಿಲವು ಸದಾಶಿವನ ಚಿಕ್ಕ ತಂಗಿಯ ಮೇಲೆ ಬಿದ್ದು, ಅದರ ಪೆಟ್ಟಿನಿಂದ ಆ ಹುಡುಗಿಯು ಮರಣ ಹೊಂದಿದಳು! ಈ ಮೇರೆಗೆ ಆ ದುರ್ದೈವಿಯಾದ ತಾಯಿಯ ಮೇಲೆ ಇಬ್ಬಗೆಯಿಂದ ದುಃಖದ ಗುಡ್ಡಗಳು ಕಳಚಿ ಬಿದ್ದವು. ಅವತ್ತಿನಿಂದ ಇದುವರೆಗೆ ಅವಳು ಮೈಮುರಿದು ದುಡಿದು ಈ ಮಕ್ಕಳ ಜೋಪಾನ ಮಾಡಿದ್ದಾಳೆ. ಸದಾಶಿವನ 'ಮ್ಯಾಟ್ರಿಕ್' ಪರೀಕ್ಷೆಯ ತನಕ ಅಭ್ಯಾಸವಾಗುವ ವರೆಗೂ ಆ ಬಡ ಪ್ರಾಣಿಯು ಅಂತು ಇಂತು ದಿವಸಗಳನ್ನು ಕಳೆದಳು. ಕಟ್ಟಕಡೆಗೆ ಅವಳಿಗೆ ಕೈಯಿಂದ ತೀರ ಕೆಲಸವಾಗದ ಹಾಗಾಗಿ ಬೇನೆ ಬಿದ್ದು ಹಾಸಿಗೆ ಯನ್ನು ಹಿಡಿದಳು. ಅದರ ದೆಸೆಯಿಂದ ಸದಾಶಿವನು ಶಾಲೆಯನ್ನು ಬಿಡಬೇಕಾಯಿತು ಆ ದುರ್ದೈವಿಯಾದ ಕುಟುಂಬದವರ ಮೇಲೆ ಈ ತರದ ಪ್ರಸಂಗವು ಒದಗಿದರೂ, ಅವರಲ್ಲಿಯ ಪ್ರತಿಯೊಬ್ಬರ

ನೀತಿಯೂ ಚಿಕ್ಕಂದಿನಲ್ಲಿದ್ದಾಗ ಸಿಕ್ಕ ಶಿಕ್ಷಣದ ಸದುಪಯೋಗವೂ ಹೊಗಳತಕ್ಕಂಥವುಗಳಾಗಿವೆ ಇಂಥ ಕುಟುಂಬದವರಿಗೆ ನೆರವಾಗುವದು ನಮ್ಮ ಮೊದಲನೆಯ ಕರ್ತವ್ಯವಾಗಿರುವದೆಂದು ನಾನು ತಿಳಿಯುತ್ತೇನೆ.

ಗ.ಡ್‌ಉಯಿಲ್ ಸಾಹೇಬರು ಡಾ. ಸಾಹೇಬರ ಭಾಷಣವನ್ನು ಲಕ್ಷ್ಯಪೂರ್ವಕವಾಗಿ ಕೇಳುತ್ತಿದ್ದರು. ಡಾ. ಸಾಹೇಬರು ತಮ್ಮ ಮಾತು ಮುಗಿಸಿದ ಎಷ್ಟೋ ವೇಳೆಯುವರೆಗೆ ಗುಡ್‌ಉಯಿಲ್ ಸಾಹೇಬರು ಆತ್ಮವಿಚಾರದಲ್ಲಿಯೇ ಮಗ್ನರಾಗಿದ್ದರು. ಅವರ ಮನದಲ್ಲಿ ಯಾವ ಬಗೆಯ ವಿಚಾರಗಳು ನಡೆದಿವೆಯೆಂಬದು ಡಾ. ಸಾಹೇಬರಿಗೆ ಮನವರಿಕೆಯಾದುದರಿಂದಲೇ ಅವರು ಅದಕ್ಕೆ ಅಡ್ಡಿ ಮಾಡಲಿಲ್ಲ. ಸುಮ್ಮನೆ ತಮ್ಮ ಮೇಜಿನ ಮೇಲೆ ಬಿದ್ದಿದ್ದ ಒಂದು ವರ್ತಮಾನ ಪತ್ರವನ್ನು ತೆರೆದು ಓದಹತ್ತಿದರು ಮುಂದೆ ಕೆಲ ಹೊತ್ತಿನ ಮೇಲೆ ಗುಡ್‌ಉಯಿಲ್‌ರು ತಮ್ಮ ವಿಚಾರದಿಂದ ಒಮ್ಮಿಂದೊಮ್ಮೆ ಎಚ್ಚತ್ತವರಾಗಿ: ‹‹ಡಾ ಸಾಹೇಬರೇ, ನೀವು ಏನೆಂದಿರಿ? ಇಂಥ ಕುಟುಂಬದವರಿಗೆ ನೆರವಾಗುವದು ನಮ್ಮ ಆದ್ಯ ಕರ್ತವ್ಯವಿದೆಯೆಂದು ಅನ್ನಲಿಲ್ಲವೇ? ಹೌದು, ನನಗಾದರೂ ಹಾಗೆಯೇ ಅನಿಸುತ್ತದೆ. ಸದಾಶಿವನು ಒಳ್ಳೇ ಹುಡುಗನಿರುವನು; ಅವನ ಮೇಲೆ ನನ್ನ ಮಮತೆಯು ಕೂಡಿದೆ. ನಾನು ಅವನ ಕಲ್ಯಾಣವನ್ನು ಮಾಡುವೆನು.'' ಹೀಗೆ ಗುಡ್‌ಉಯಿಲ್ ಸಾಹೇಬರು ತಮ್ಮ ವಿಚಾರದ ಸೆಳವಿನಲ್ಲಿಯೇ ಮುಂದೆ ಬಾಗಿ, ಡಾ. ಸಾಹೇಬರ ಮೇಜಿನ ಮೇಲಿದ್ದ ಒಂದು ಬಿಳಿಯ ಕಾಗದವನ್ನು ತಕ್ಕೊಂಡು ಅದರ ಮೇಲೆ ಅವರು ಏನೋ ಸಂಗತಿಯನ್ನು ಬರೆದರು; ಮತ್ತು "ಡಾ. ಸಾಹೇಬರೇ, ಆ ಸದಾಶಿವನ ಪತ್ತೆಯು ನಿಮಗೆ ಗೊತ್ತಿರುವದು. ಆ ಪತ್ತೆಯ ಮೇಲೆ ಈ ಪತ್ರವನ್ನು ಈಗಿಂದೀ

ಗಲೇ ಟಪಾಲಿನಿಂದ ಕಳಿಸಿರಿ. ನಾನು ಅವನಿಗೆ ನಾಳಿನ ದಿವಸ ಮುಂಜಾನೆ ಹನ್ನೊಂದು ಗಂಟೆಗೆ ಇಲ್ಲಿಗೆ ಬರಲಿಕ್ಕೆ ಬರೆದಿರುವೆನು. ನಾಳಿನ ದಿವಸವೇ ಆ ಹುಡುಗನ ಕಲ್ಯಾಣಕ್ಕಾಗಿ ಏನಾದರೂ ವ್ಯವಸ್ಥೆಯನ್ನು ಮಾಡಬೇಕೆಂದು ನನಗನಿಸುತ್ತದೆ''. ಮುಂದೆ ಕ್ಷಣಹೊತ್ತಿನ ವರೆಗೆ ಸುಮ್ಮನಾಗಿ ಗುಡ್‌ಉಯಿಲ್ ಸಾಹೇಬರು ಮತ್ತೆ:''ನಾನು ಇಲ್ಲಿಗೆ ಇವತ್ತಿನ ದಿವಸ ಶಸ್ತ್ರಕ್ರಿಯೆಯನ್ನು ಮಾಡಿಸಿಕೊಳ್ಳಲಿಕ್ಕೆಂದು ಬಂದಿದ್ದೆನು; ಆದರೆ ನನ್ನ ಮನಸ್ಸು ಅದಕ್ಕೆ ಈಗ ಹಿಪ್ಪಲೊಲ್ಲದು,'' ಎಂದು ಅಂದರು.

''ಆದರೆ ಮೊದಲು ನನಗೆ ನಿಮ್ಮ ಬೆರಳನ್ನಾದರೂ ತೋರಿಸಿರಿ. ಹೀಗೆ ನೀವು ಹಿಂದೊಂದೇ ದಿವಸವನ್ನು ಮುಂದಕ್ಕೆ ಹಾಕುತ್ತ ಹೋದರೆ ಇಡೀ ಬೊಟ್ಟನ್ನೇ ಕೊಯಿದು ತೆಗೆಯುವ ಪ್ರಸಂಗ ಬಂದೀತು!''

ಆ ಮೇಲೆ ಹತ್ತು ಮಿನೀಟುಗಳ ವರೆಗೆ ಡಾ. ಸಾಹೇಬರು ಗುಡ್‌ಉಯಿಲ್ ಸಾಹೇಬರ ಬೆರಳನ್ನು ಚನ್ನಾಗಿ ಪರೀಕ್ಷಿಸಿ ನೋಡಿ, ''ಇವತ್ತೊಂದು ದಿವಸ ಹೋದರೂ ಅಡ್ಡಿಯಿಲ್ಲ; ಆದರೆ ನಾಳೆ ಮಾತ್ರ ಮೊದಲಿನ ಗಣಿಕೆಯ ಶಸ್ತ್ರಕ್ರಿಯೆಯನ್ನು ಮಾಡಸಲೇ ಬೇಕು. ಇಲ್ಲದಿದ್ದರೆ ಅದರ ಮುಂದಿನ ಗಣಿಕೆಯ ಮೇಲೆ ವಿಷದ ಪರಿಣಾಮವಾಗದೆ ಇರದು,'' ಎಂದು ಅಂದರು.

ಡಾ. ಸಾಹೇಬರ ಮಾತು ಕೇಳಿ ಗುಡ್‌ಉಯಿಲ್ ಸಾಹೇಬರು ತಮ್ಮ ಬೆರಳಿನ ಕಡೆಗೆ ನೋಡುತ್ತ ಕುಳಿತರು. ನಾಳಿನ ದಿವಸ ನಡುಬೆರಳಿನ ಮೊದಲಿನ ಗಣಿಕೆಯನ್ನು ಕೊಯ್ದು ತೆಗೆಸಿದ ಮೇಲೆ ಆ ಮುರಕ ಬೆರಳಿನಿಂದ ಕೈಯು ವಿದ್ರೂಪವಾಗಿ ಕಾಣುವದೆಂದು ಅವರಿಗೆ ಅನಿಸಹತ್ತಿತು. ಉಗುರಿಗೆ ಸ್ವಲ್ಪ ಗಾಯವಾದಾಗ ದುರ್ಲಕ್ಷ್ಯ ಮಾಡಿದುದರಿಂದಲೇ ತಮಗೆ ಬೆರಳು ಕೊಯ್ಯಿಸುವ

ಪ್ರಸಂಗ ಬಂತೆಂದು ನೆನೆದು ಅವರು ಕಳವಳಗೊಂಡರು. ಎಷ್ಟೋ ಜನರಿಗೆ ಹಲ್ಲಿನಿಂದ ಉಗುರು ಕಡಿದು ತೆಗೆಯುವ ಕೆಟ್ಟ ಚಟವಿರುತ್ತದೆ. ಅಂಥವರು ಈ ಮೇಲಿನ ಸಂಗತಿಯ ಕಡೆಗೆ ಅವಶ್ಯವಾಗಿ ಲಕ್ಷ್ಯಕೊಡತಕ್ಕದ್ದು. ಇರಲಿ ಮುಂದೆ ಕೆಲಹೊತ್ತಿನ ವರೆಗೆ ಶಸ್ತ್ರಕ್ರಿಯೆಯ ಸಂಬಂಧವಾಗಿ ಮಾತು-ಕಥೆಗಳಾದ ಮೇಲೆ ಗುಡ್ ಉಯಿಲ್ ಸಾಹೇಬರು ಮನೆಗೆ ಹೊರಟರು. ಅವರು ಸದಾಶಿವನಿಗ ಬರೆದಿಟ್ಟ ಪತ್ರವನ್ನು ಡಾ ಸಾಹೇಬರು ತಮ್ಮ ಶಿಪಾಯಿಯ ಕಡೆಯಿಂದ ಪೋಸ್ಟಿನಲ್ಲಿ ಹಾಕಿಸಿದರು.

ಅಂದು ಶನಿವಾರವಿತ್ತು. ಸದಾಶಿವನು ಮುಂಜಾನೆ ಸ್ನಾನ ಮಾಡಿ ತನ್ನ ಗುರುಗಳಾದ ಕೇಶವರಾವ ಮಾಸ್ತರರ ಮನೆಗೆ ಹೊರಟಿದ್ದನು ದಾರಿಯಲ್ಲಿ ಪೋಸ್ಟಮನ್‌ನು ಒಂದು ಪತ್ರವನ್ನು ಅವನ ಕೈಯಲ್ಲಿಟ್ಟನು. ಪಾಕೀಟಿನ ಮೇಲಿಂದ ಆ ಪತ್ರವು ಡಾ. ಸಾಹೇಬರ ಕಡೆಯಿಂದ ಬಂದಿರುವದೆಂದು ಸದಾಶಿವನು ತಾತ್ಕಾಲಕ್ಕೇ ಗುರುತು ಹಿಡಿದನು. ಯಾಕಂದರೆ, ಆ ಪಾಕೀಟಿನ ಮೇಲೆ ಒಂದು ಮೂಲೆಯಲ್ಲಿ ಡಾ. ಸಾಹೇಬರ ಛಾಪಿಸಿದ ವಿಳಾಸವಿತ್ತು. ಸದಾಶಿವನು ಪಾಕೀಟನ್ನು ಒಡೆದು, ಒಳಗಿನ ಪತ್ರವನ್ನು ಹೊರಗೆ ತೆಗೆದನು; ಅದರ ಮೇಲೆ ನಾಲ್ಕೇ ಸಾಲುಗಳನ್ನು ಬರೆದಿದ್ದರು. ಅದರ ಒಕ್ಕಣಿಕೆ ಕೆಳಗೆ ಬರೆದಂತೆ ಇತ್ತು:—

ಪ್ರಿಯ ಸದಾಶಿವ,

ನಾಳಿನ ದಿವಸ ಮುಂಜಾನೆ ಹನ್ನೊಂದು ಗಂಟೆಗೆ ನಾನು ಡಾ ಸಾಹೇಬರ ದವಾಖಾನೆಯಲ್ಲಿ ನಿನ್ನ ಹಾದೀ ನೋಡುತ್ತ ಕುಳಿತಿರುತ್ತೇನೆ. ನೀನು ಅವಶ್ಯವಾಗಿ ಬಂದು ಭೆಟ್ಟಿಯಾಗಬೇಕು.

ಚರ್ಚಗೇಟ ಸ್ಟ್ರೀಟ, ಮುಂಬಯಿ
ತಾ|| ೭-೪-೧೯೨೭

ನಿನ್ನ ಹಿತಚಿಂತಕ,
ಗುಡ್‌ಉಯಿಲ್.

ಆ ಪತ್ರವನ್ನು ಓದಿ ಆ ಬಗ್ಗೆ ವಿಚಾರ ಮಾಡುತ್ತ ಸದಾಶಿವನು ಮಾಸ್ತರರ ಮನೆಗೆ ಮುಟ್ಟಿದನು; ಆದರೆ ಅವರು ಶಾಲೆಗೆ ಹೋಗಿರುವರೆಂದು ತಿಳಿದು ಬಂತು. ಈ ಹೊತ್ತು ಶನಿವಾರವಿರುವದೆಂಬದು ಅವನ ಲಕ್ಷ್ಯಕ್ಕೇ ಬಂದಿದ್ದಿಲ್ಲ. ಆಗ ಅವನಿಗೆ ಶಾಲೆಗೆ ಹೋಗಿ ಮಾಸ್ತರರಿಗೆ ಭೆಟ್ಟಿಯಾಗಬೇಕೋ,-ಆಗಬಾರದೋ ಎಂಬ ವಿಚಾರವು ಬಿತ್ತು. ಪತ್ರದಲ್ಲಿ ಬರೆದ ಮೇರೆಗೆ ಹನ್ನೊಂದು ಗಂಟೆಗೆ ಗುಡ್‌ಉಯಿಲ್ ಸಾಹೇಬರಿಗೆ ಭೆಟ್ಟಿಯಾಗಲಿಕ್ಕೇ ಬೇಕು; ಮತ್ತು ಅದಕ್ಕೂ ಮುಂಚಿತವಾಗಿ ಮಾಸ್ತರರಿಗೂ ಭೆಟ್ಟಿಯಾಗ ಬೇಕೆಂದು ಅವನು ನಿಶ್ಚಯಿಸಿ ಆ ಪ್ರಕಾರ ಅವನು ಶಾಲೆಗೇ ಹೋದನು.

---

## ೧೨ನೆಯ ಪ್ರಕರಣ.

## ಈ ಬೈರಾಗಿಯು ಯಾರು?

ಸದಾಶಿವನು ಶಾಲೆಗೆ ಮುಟ್ಟಿದಾಗ ಸರಾಸರಿ ಎಂಟು ಹೊಡೆಯಲಿಕ್ಕೆ ಬಂದಿತ್ತು. ಕೇಶವರಾವ ಮಾಸ್ತರರು ತಮ್ಮ ವರ್ಗದಲ್ಲಿ ಇನ್ನೂ ಹುಡುಗರಿಗೆ ಕಲಿಸುತ್ತ ಕುಳಿತಿದ್ದರು ಸದಾಶಿವನು ಆ ವರ್ಗದ ಬಾಗಿಲದ ಬಳಿಯಲ್ಲಿ ಹೋಗಿ ನಿಂತನು. ಅವನನ್ನು ನೋಡಿದ ಕೂಡಲೆ ಕೇಶವರಾಯರು ಒಳಗೆ ಕರೆದರು.

"ಸದಾಶಿವಾ, ಎರಡು ಮೂರು ದಿವಸಗಳಿಂದ ನೀನು ಬಂದೇ ಇಲ್ಲ ನಿಮ್ಮ ಅಕ್ಕನನ್ನು ಕರಕೊಂಡು ಬಂದೆಯೇನು?"

"ಹೌದು. ಅಕ್ಕನು ಬಂದು ಸುರಕ್ಷಿತವಾಗಿ ಪ್ರಸೂತಳಾಗಿದ್ದಾಳೆ."

"ಆ! ಏನೆಂದಿ? ಪ್ರಸೂತಳಾದಳೇ? ಎಷ್ಟು ದಿವಸವಾಯಿತು? ಏನು ಹಡೆದಿದ್ದಾಳೆ?"

"ಮೊನ್ನಿನ ದಿವಸ ಹಡೆದಳು. ಗಂಡುಕೂಸು ಹುಟ್ಟಿದೆ; ಆದರೆ ಆ ಸಂಗತಿಯು ಬಹಳ ದೊಡ್ಡದಿದೆ"

"ಹೀಗೋ? ಸ್ವಲ್ಪ ತಡೆ. ಈ ನನ್ನ ತಾಸು ಮುಗಿದ ಕೂಡಲೆ ನನಗೆ ಕೆಲಸವೇ ಇಲ್ಲ. ಆ ಮೇಲೆ ನಾವು ಮಾತಾಡೋಣ ವಂತೆ. ನೀನು ಇಲ್ಲಿಯೇ ಸ್ವಲ್ಪ ಹೊತ್ತಿನ ವರೆಗೆ ಕುಳಿತುಕೋ."

ಆದರೆ ಸದಾಶಿವನಿಗೆ ಕೂಡ್ರುವ ಅವಶ್ಯಕತೆಯೇ ಬೀಳಲಿಲ್ಲ. ಯಾಕೆಂದರೆ ಅಷ್ಟರಲ್ಲಿಯೇ ಆ ತಾಸು ತೀರಿ 'ಢಂಣ್-ಢಂಣ್' ಎಂದು ಎಂಟರ ಗಂಟೆ ಹೊಡೆಯಿತು. ಕೂಡಲೆ ಕೇಶವರಾಯರು ಮೇಲಕ್ಕೆದ್ದರು ಅವರು ಹುಡುಗರಿಗೆ ಮುಂದಿನ ಅಭ್ಯಾಸವನ್ನು ನಿಯಮಿಸಿಕೊಟ್ಟರು; ಮತ್ತು ತಮ್ಮ ಸಂಗಡ ಸದಾಶಿವನನ್ನು ಕರಕೊಂಡು ಮಾಸ್ತರ ಜನರು ವಿಶ್ರಮಿಸುವ ಕೋಣೆಗೆ ಹೋದರು. ಅಲ್ಲಿಗೆ ಹೋದ ಕೂಡಲೆ "ಹೂ, ಹೇಳು ನೋಡೋಣ, ಏನೇನು ಸಂಗತಿಯು ಸಂಭವಿಸಿತು!" ಎಂದು ಕೇಳಿದರು.

ಒಂದು ಯಂತ್ರಕ್ಕೆ ಕೀಲೀ ಕೊಟ್ಟರೆ ಅದು ಹೇಗೆ ನಡೆಯು ವದೋ, ಹಾಗೆಯೇ ಸದಾಶಿವನು ಸರಸರನೆ ಮೊದಲಿನಿಂದ ಕಡೆ ತನಕ ತನ್ನ ಎಲ್ಲ ಸಂಗತಿಗಳನ್ನು ಹೇಳಿದನು; ಮತ್ತು ಗುಡ್ ಉಯಿಲ್ ಸಾಹೇಬರ ಕಡೆಯಿಂದ ಬಂದ ಪತ್ರವನ್ನೂ ಅವರಿಗೆ ತೋರಿಸಿದನು ಕೇಶವರಾಯರು ಆ ಪತ್ರವನ್ನು ಓದಿದರು; ಮತ್ತು ಗಂಭೀರ ಸ್ವರದಿಂದ ಅವರು ಅಂದದ್ದೇನಂದರೆ:—

ಕೆಟ್ಟದ್ದರಿಂದ ಚಲೋದು ಹುಟ್ಟುವದೆನ್ನುತ್ತಾರೆ; ಅದು ಹೀಗೆಯೇ ನೋಡು! ನಿನಗೆ ಒಬ್ಬ ಎಮ್. ಡಿ. ಡಾಕ್ಟರನ ಕೆಟ್ಟ

ಅನುಭವವು ಬಂದರೂ, ಅದರಿಂದ ಕಡೆಗೆ ಕಲ್ಯಾಣವೇ ಆಯಿತು. ಆದ ಸಂಗತಿಗಳೆಲ್ಲ ನೆಟ್ಟಗೇ ಎಂದು ತಿಳಕೊಂಡು ನಾವು ನಮ್ಮ ಮನಸ್ಸಿಗೆ ಸಮಾಧಾನವನ್ನು ಹಚ್ಚಿಕೊಳ್ಳಬೇಕು. ನಿನ್ನ ಆಯುಷ್ಯ ದಲ್ಲಿ ಕಿತ್ತಿ ಹಾಕಿ ಕೊಡುವಂಥ ಮತ್ತು ನಿಮ್ಮ ದುಃಖಮಯ ಗೃಹ ಸ್ಥಿತಿಯಲ್ಲಿ ಕ್ರಾಂತಿಯನ್ನುಂಟು ಮಾಡುವಂಥ ವೇಳೆಯು ಬಂದದ್ದ ರಿಂದಲೇ ಡಾ. ರಾಜೇಯವರಿಗೆ ಅಂಥ ಬುದ್ಧಿ ಹುಟ್ಟಿತೆಂದೂ, ಮತ್ತು ಗುಡ್‌ಉಯಿಲ್ ಸಾಹೇಬರಂಥ ಹಿತಚಿಂತಕರು ದೊರೆತ ರೆಂದೂ ನೀನು ಏಕೆ ತಿಳಿಯಬಾರದು? ನೀನು ಅಂದಂತೆಯೇ ಡಾ. ರಾಜೆ ಇವರು ಅತಿ ಗರ್ವಿಷ್ಠರಿರಬಹುದು. ಅವರ ಆ ತರದ ವರ್ತ ನವೇ ನಿನ್ನ ಕಲ್ಯಾಣಕ್ಕೆ ಕಾರಣವಾಯಿತೆಂದು ನಾನು ಅನ್ನು ತ್ತೇನೆ. ಇರಲಿ. ಹಂಬತ್ತು ಹೊಡೆಯಲಿಕ್ಕೆ ಬಂದಿರುವದು. ನೀನು ಮನೆಗೆ ಹೋಗಿ ಊಟಮಾಡಿ ಸರಿಯಾದ ವೇಳೆಗೆ ದವಾ ಖಾನೆಗೆ ಹೋಗು. ಸಾಹೇಬ ಜನರು ಬಹಳ ನಿಯಮಿತತನದವ ರಿರುತ್ತಾರೆ.''

ಇಷ್ಟರಲ್ಲಿಯೇ ಹಂಬತ್ತರ ಗಂಟೆಯಾಯಿತು. ಸದಾಶಿವನು ಮಾಸ್ತರರ ಅಪ್ಪಣೆಯನ್ನು ಪಡೆದು ಮನೆಗೆ ಹೊರಟನು. ಗುಡ್ ಉಯಿಲ್ ಸಾಹೇಬರು ತನ್ನನ್ನು ನಿಯಮಿತ ವೇಳೆಗೆ ಏತಕ್ಕೆ ಕರೆ ದಿರಬಹುದೆಂಬ ವಿಚಾರವೇ ಅವನ ಮನಸ್ಸಿನಲ್ಲಿ ನಡೆದಿತ್ತು. ಮನೆಗೆ ಹೋದ ಕೂಡಲೆ ಅವನು ತನ್ನ ತಾಯಿಗೆ ಪತ್ರದೊಳಗಿನ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿ ಭಾಗೀರಥಿದೇವಿಗೆ ಇನ್ನು ತಮ್ಮ ದುಃಖದ ದಿವಸಗಳು ಮುಗಿಯುತ್ತ ಬಂದವೆಂದು ಅನಿಸಿತು. ಈ ಹೊತ್ತು ಮುಂಜಾವಿನಿಂದ ಅವಳಿಗೆ ಒಂದು ತರದ ಉತ್ಸಾಹವುಂಟಾಗಿತ್ತು. ಪ್ರತಿಯೊಂದು ನಿಮಿಷಕ್ಕೆ ಅವ ಳಿಗೆ ಅತಿ ಚಮತ್ಕಾರಿಕ ಆನಂದದ ಭಾವನೆಗಳುಂಟಾಗಿ, ಅದರ ಕಾರ

ಣವು ಅವಳಿಗೇ ತಿಳಿಯದಂತಾಗಿತ್ತು. ಕಳೆದ ಹನ್ನೆರಡು ವರ್ಷಗಳಲ್ಲಿ ಅವಳ ಮನಸ್ಸಿಗೆ ಈ ಬಗೆಯ ಉತ್ಸಾಹವು ಎಂದೂ ಆಗಿದ್ದಿಲ್ಲ; ಆದರೆ ಇವತ್ತಿನ ದಿವಸ ಅಕಲ್ಪಿತವಾದ ಆಶಾಜನಕ ಹಲಕೆಲವು ವಿಚಾರಗಳ ತರಂಗಗಳು ಅವಳ ಮನಸ್ಸಿನಲ್ಲಿ ಒಂದರ ಮೇಲೊಂದು ಉದ್ಭವಿಸತೊಡಗಿದ್ದವು.

ಕೆಲಹೊತ್ತಿನ ಮೇಲೆ ಸದಾಶಿವನು ಊಟ ತೀರಿಸಿಕೊಂಡು ಹೊರಗೆ ಬಂದನು. ಅವನು ಲಗುಬಗೆಯಿಂದ ತನ್ನ ವಸ್ತ್ರಗಳನ್ನು ಧರಿಸಿಕೊಂಡನು. ಕೇಶವರಾಯರು ‹ಸಾಹೇಬ ಜನರು› ನಿಯಮಿತ ತನದವರಿರುತ್ತಾರೆಂದು' ಹೇಳಿದ್ದು ಅವನ ಪೂರಾ ಲಕ್ಷ್ಯದಲ್ಲಿತ್ತು ಅವನು ಕೂಡಲೆ ತನ್ನ ತಾಯಿಗೆ ನಮಸ್ಕರಿಸಿ, ತೀವ್ರವೇ ಮನೆಯಿಂದ ಹೊರಬಿದ್ದನು. ಅವನನ್ನು ನೋಡುವದಕ್ಕೆಂದು ಸಾವಿತ್ರಿಯು ತಲೆಬಾಗಿಲಲ್ಲಿ ಹೋಗಿ ನಿಂತಳು. ತಮ್ಮ ಅಣ್ಣನಿಗೆ ಸಾಹೇಬರ ಪತ್ರ ಬಂದಿದೆ; ಅದರಂತೆ ಅವನು ಅವರಿಗೆ ಭೆಟ್ಟಿಯಾಗಲಿಕ್ಕೆ ಹೋಗುತ್ತಾನೆಂಬ ಆನಂದದ ವಿಚಾರದಲ್ಲಿ ತಲ್ಲೀನಳಾಗಿ, ಅವಳು ತನ್ನ ಕೈಯೊಳಗಿನ ಕೆಲಸವನ್ನು ಅಷ್ಟಕ್ಕೇ ಬಿಟ್ಟುಕೊಟ್ಟು ಅಣ್ಣನನ್ನು ನೋಡುವದಕ್ಕಾಗಿ ಬಾಗಿಲಿಗೆ ಬಂದು ನಿಂತಿದ್ದಳು. ತನ್ನ ಅಣ್ಣನು ತೀವ್ರವೇ ಕಣ್ಮರೆಯಾದರೂ ಅವಳು ಅಲ್ಲಿಯೇ ನಿಂತಿದ್ದಳು. ಇಷ್ಟರಲ್ಲಿಯೇ ಎದುರಿಗೆ ಒಬ್ಬ ಬೈರಾಗಿಯು ಬರುತ್ತಿರುವದು ಅವಳ ಕಣ್ಣಿಗೆ ಬಿತ್ತು ಸಾವಿತ್ರಿಯು ತತ್ಕಾಲಕ್ಕೇ ಆ ಬೈರಾಗಿಯ ಗುರ್ತು ಹಿಡಿದಳು. ನಾಲ್ಕು ದಿವಸಗಳ ಹಿಂದೆ ಮನೆಯಲ್ಲಿ ಒಂದು ಹಿಡಿ ಕಾಳು ಕೂಡಾ ಇಲ್ಲದಾಗ ಭಿಕ್ಷೆಗೆಂದು ಬಂದು, ಭಿಕ್ಷೆಯನ್ನು ಇಸಕೊಳ್ಳದೆ, ತನ್ನ ಜೋಳಿಗೆಯೊಳಗಿನ ಕಾಳನ್ನೆಲ್ಲ ಅವಳ ಮುಂದೆ ಸುರುವಿ ಹೋದ ಸಂನ್ಯಾಸಿಯೇ ಅವನಾಗಿದ್ದನು. ಸಾವಿತ್ರಿಯು ಬಾಗಿಲಲ್ಲಿ ನಿಂತದ್ದನ್ನು ನೋಡಿ, ಆ ಬೈರಾಗಿಯು ಹಾಗೆಯೇ

ಮುಂದಕ್ಕೆ ಸಾಗಿದನು ಅದನ್ನು ಕಂಡು ಅವಳು: ‘‘ಮಹಾರಾಜರೇ, ನೀವು....’’ ಅಷ್ಟರಲ್ಲಿಯೇ ಅವಳನ್ನು ಮುಂದಕ್ಕೆ ಮಾತಾಡಗೊಡದೆ:-ಮಗಳೇ, ಆ ದಿವಸದ ಮಾತನ್ನೇ ತೆಗೆಯಬೇಡ. ಆ ದಿವಸವು ಹೋಯಿತು ಇನ್ನು ಅದರ ನೆನಪನ್ನೇ ತೆಗೆಯಬೇಡ, ಎಂದು ಬೈರಾಗಿಯು ಅಂದನು

‘‘ಹಾಗಾದರೆ ನಾನು ತಮಗೆ ಈ ಹೊತ್ತು ಅಕ್ಕಿಯನ್ನು ನೀಡಲ್ಯಾ?’’

‘‘ಬೇಡ, ನಾನು ಭಿಕ್ಷೆ ಬೇಡುವ ಮನೆಗಳು ತೀರಿದವು. ಇವತ್ತಿನ ದಿವಸ ನೀನು ನನಗ ಭಿಕ್ಷೆಯನ್ನು ನೀಡಲಿಕ್ಕೆ ಸಿದ್ಧಳಾಗಿರುವೆ ಇದರ ಮೇಲಿಂದ ನಿಮ್ಮ ಇಂದಿನ ಸ್ಥಿತಿಯು ಸಮಾಧಾನಕರವಾಗಿರುವದೆಂಬದನ್ನು ಕೇಳಿ ನನಗೆ ಆನಂದವಾಗಿದೆ. ನಿಮಗೆ ಹೀಗೆಯೇ ಇನ್ನು ಮುಂದಾದರೂ ಸಮಾಧಾನಕರವಾದ ದಿವಸಗಳು ಬರಲೆಂದೂ ಮತ್ತು ನಿಮಗೆ ಕಲ್ಯಾಣವಾಗಲೆಂದೂ ನನ್ನ ಅಂತಃಕರಣಪೂರ್ವಕ ಇಚ್ಛೆಯಿದೆ.’’

ಇಷ್ಟು ಮಾತನಾಡಿ ಬೈರಾಗಿಯು ತನ್ನ ಹಾದಿಯನ್ನು ಹಿಡಿದನು. ಅವನು ದೊಡ್ಡ ಬೀದಿಗೆ ಮುಟ್ಟಿದ ಕೂಡಲೆ, ಅದೇ ಶಾಲೆಯನ್ನು ಬಿಟ್ಟು ಮನೆಗೆ ತಿರುಗಿ ಹೋಗುವ ಒಬ್ಬಿಬ್ಬರು ವಿದ್ಯಾರ್ಥಿಗಳು ಅವನಿಗೆ ಹಾದಿಯಲ್ಲಿ ಭೆಟ್ಟಿಯಾದರು. ಅವರನ್ನು ಕಂಡ ಕೂಡಲೆ ಬೈರಾಗಿಯು ಮನಸ್ಸಿನಲ್ಲಿ ಏನೋ ಒಂದು ವಿಚಾರವು ಹೊಳೆಯಿತು; ಮತ್ತು ‘ಇವರಲ್ಲಿ ಒಬ್ಬ ಹುಡುಗನನ್ನು ಕೇಳಿದರೆ ನಿಜವಾಗಿ ಅವನ ಶೋಧವಾದೀತು’ ಎಂದು ತನ್ನಷ್ಟಕ್ಕೆ ಒಟಗುಟ್ಟುತ್ತ, ಆ ಸಂನ್ಯಾಸಿಯು ಮುಂದೆ ಸಾಗಿ ಎದುರಿಗೆ ಬರುತ್ತಿದ್ದವರಲ್ಲಿ ಒಬ್ಬ ಹುಡುಗನನ್ನು ತಡೆದು: ‘‘ಎಲೋ ತಮ್ಮಾ, ನಿನಗೆ ಸದಾಶಿವ ಗೋವಿಂದ ವೈಶಂಪಾಯನನೆಂಬ ಹೆಸರಿನ ಹುಡುಗನ ಗುರುತು

ಇರುವದೇನು?''

ಆ ಹುಡುಗನು ವಿಚಾರ ಮಾಡುತ್ತ "ಸದಾಶಿವ ಗೋವಿಂದ ವೈಶಂಪಾಯನನೇ? ಹೌದು-ಹೌದು ಗುರತು ಇರುತ್ತದೆ. ಅವನು ನಮ್ಮ ಶಾಲೆಯಲ್ಲಿ ಇದ್ದನು; ಆದರೆ ಅವನು ಶಾಲೆಯನ್ನು ಬಿಟ್ಟಿದ್ದಾನೆ.''

ಅವನು ಎಲ್ಲಿ ಇರುತ್ತಾನೆಂಬದು ಗೊತ್ತಿರುತ್ತದೆಯೋ?

ಇಲ್ಲ; ಆದರೆ ನಮ್ಮ ಕೇಶವರಾವ ಮಾಸ್ತರರಿಗೆ ಗೊತ್ತಿರುತ್ತದೆ. ಅವನು ಇವತ್ತೇ ಕೇಶವರಾವ ಮಾಸ್ತರರಿಗೆ ಭೆಟ್ಟಿಯಾಗಲಿಕ್ಕೆ ನಮ್ಮ ಶಾಲೆಗೆ ಬಂದಿದ್ದನು.

ಆ ಕೇಶವರಾವ ಮಾಸ್ತರರು ಎಲ್ಲಿ ಇರುತ್ತಾರೆ?

"ಅವರು ಕೋರೆಗಾಂವಕರನ ಓಣಿಯಲ್ಲಿ ಇರುತ್ತಾರೆ; ಆದರೆ ನೀವು ಈಗ ಶಾಲೆಗೆ ಹೋದರೆ ಅವರು ನಿಮಗೆ ಭೆಟ್ಟಿಯಾಗಬಹುದು ಯಾಕಂದರೆ ಇನ್ನೂವರೆಗೆ ಅವರು ಮನೆಗೆ ಹೋಗಿರಲಿಕ್ಕಿಲ್ಲ.''

ಆ ಹುಡುಗನು ಶಾಲೆಯ ಪತ್ತೆಯನ್ನು ಹೇಳಿದ ಕೂಡಲೆ ಬೈರಾಗಿಯು ಆ ದಿಕ್ಕಿಗೆ ಹೊರಳಿದನು ಅವನು ಅತಿ ತ್ವರೆಯಿಂದ ನಡೆಯುತ್ತಿದ್ದನು ಹುಡುಗರು ಇನ್ನೂ ಶಾಲೆಯೊಳಗಿಂದ ಹೊರಗೆ ಬರುತ್ತಲಿದ್ದರು ಶಾಲೆಯ ಹತ್ತರ ಹೋದ ಕೂಡಲೆ ಅವನು ಒಬ್ಬ ಹುಡುಗನಿಗೆ ಮತ್ತೆ ಕೇಶವರಾಯರು ಎಲ್ಲಿರುವರೆಂದು ಕೇಳಿದನು; ಆದರೆ ಅವು ಉಡಾಳ ಹುಡುಗರು ಅವರೊಳಗಿನವನೊಬ್ಬನು ಮುಂದಕ್ಕೆ ಸರಿದು: "ಏನರೀ ಗಡ್ಡದ ಬಾವಾಜಿ, ಜೋಳಿಗೆಯನ್ನು ಹಿಡಕೊಂಡು ಶಾಲೆಗೆ ಕಲಿಯಲಿಕ್ಕೆ ಬರುವಿರೇನು?'' ಎಂದು ಕೇಳಿದನು ಅದನ್ನು ಕೇಳಿದ ಕೂಡಲೆ ಉಳಿದ ಎಲ್ಲ ಹುಡುಗರೂ ಗಹಗಹಿಸಿ ನಗಲಾರಂಭಿಸಿದರು. ಇಷ್ಟರೊಳಗೆ

ಹೊಳಗಿನಿಂದ: "ಏನು ಗದ್ದಲವು ನಡೆದಿದೆ?" ಎಂಬ ಅಧಿಕಾರಯುಕ್ತ ಶಬ್ದಗಳು ಕೇಳಿಸಿದವು.

ಕೂಡಲೆ ಮೇಲಿನ ಶಬ್ದಗಳನ್ನು ಉಚ್ಚರಿಸಿದ ವ್ಯಕ್ತಿಯು ಹೊರಗೆ ಬಂದು:—"ಮಹಾರಾಜ, ಇದು ಶಾಲೆ ಇರುವದು. ಇಲ್ಲಿ ನಿಮಗೆ ಭಿಕ್ಷೆಯನ್ನು ಯಾರು ಹಾಕುವರು?" ಎಂದು ನುಡಿದರು.

"ಹೌದು ಮಹಾರಾಜ, ಇದು ಶಾಲೆಯಿದೆಯೆಂದು ನನಗೆ ತಿಳಿಯುತ್ತದೆ. ನಾನು ಇಲ್ಲಿಗೆ ಭಿಕ್ಷೆಬೇಡುವ ಉದ್ದೇಶದಿಂದ ಬಂದಿಲ್ಲ. ನಾನು ಕೇಶವರಾವ ಮಾಸ್ತರ ಸಾಹೇಬರಿಗೆ ಭೆಟ್ಟಿ ಯಾಗಬೇಕಾಗಿದೆ."

"ಯಾತರ ದೆಶೆಯಿಂದ?"

"ಅವರ ಹತ್ತರ ಸ್ವಲ್ಪ ಸ್ವಂತದ ಕೆಲಸವಿರುವದು."

"ಸ್ವಂತದ ಕೆಲಸ?" ಎಂದು ಆ ಬೈರಾಗಿಯ ಕಡೆಗೆ ಸಂಶಯ ಯುಕ್ತ ದೃಷ್ಟಿಯಿಂದ ನೋಡುತ್ತ ಆ ಗೃಹಸ್ಥನು ಅಂದನು.

"ಮಹಾರಾಜ, ನೀವು ನನ್ನ ವಿಷಯವಾಗಿ ತಿಲಮಾತ್ರವಾದರೂ ಸಂಶಯಪಡಬೇಡಿರಿ."

"ಸಂಶಯ ತೆಗೆದುಕೊಳ್ಳುವ ಪ್ರಶ್ನೆಯಿಲ್ಲ. ಹೇಳಿರಿ, ನಿಮ್ಮದೇನು ಕೆಲಸವಿರುವದು? ನಾನೇ ನಿಮಗೆ ಬೇಕಾದ ಕೇಶವರಾವ ಮಾಸ್ತರನಿದ್ದೇನೆ."

ಹೀಗೆಯೊ! ಮಹಾರಾಜ, ನಿಮಗೆ ಹತ್ತು ಮಿನೀಟುಗಳ ವರೆಗೆ ನನ್ನ ಮಾತನ್ನು ಕೇಳುವಷ್ಟು ಅವಕಾಶವಿದೆಯೇ? ಕೇಶವರಾವ ಮಾಸ್ತರರು ಕ್ಷಣ ಹೊತ್ತಿನ ವರೆಗೆ ಆ ಸಂನ್ಯಾಸಿಯ ಮೋರೆಯ ಕಡೆಗೆ ದಿಟ್ಟಿಸಿ ನೋಡಿದರು; ಆದರೆ ಅವನ ಮುಖಮುದ್ರೆಯು ಶಾಂತ ಮತ್ತು ಗಂಭೀರವಾದದ್ದಿತ್ತು. ಇವನು ಏನಾದರೊಂದು ಸಂಗತಿಯನ್ನು ಗೊತ್ತು ಹಚ್ಚಲಿಕ್ಕೆ ಬಂದ ಗುಪ್ತ

ಪೋಲೀಸನಿರಬಹುದೆಂದು ಅವರಿಗೆ ಮೊದಲು ಸಂಶಯವು ಬಂದಿತ್ತು. ಆದರೆ ಕ್ಷಣಹೊತ್ತಿನ ವರೆಗೆ ಆ ಸಂನ್ಯಾಸಿಯ ಗಂಭೀರ ಮುದ್ರೆಯನ್ನು ನೋಡಿದೊಡನೆ ಅವರ ಸಂಶಯವು ಇಲ್ಲದ ಹಾಗಾಯಿತು.

ತಮ್ಮ ಕೆಲಸವು ಏನಿರುವದೆಂಬದನ್ನು ಹೇಳಿರಿ.

ನನಗೆ ಸದಾಶಿವ ಗೋವಿಂದ ವೈಶಂಪಾಯನನೆಂಬ ಹುಡುಗನ ವಿಷಯದ ಕೆಲವು ಸಂಗತಿಗಳು ಗೊತ್ತಾಗಬೇಕಾಗಿವೆ

ಅದ್ಯಾಕೆ?

ಅವನ ಕಲ್ಯಾಣದ ದೆಶೆಯಿಂದ. ನಾನು ಅವನ ಹಬ್ಬ ನಿಜವಾದ ಹಿತಚಿಂತಕನಿದ್ದೇನೆ, ಎಂದು ಬೈರಾಗಿಯು ಶಾಂತಸ್ವರದಿಂದ ನುಡಿದನು.

"ಹಿತಚಿಂತಕ" ಎಂಬ ಶಬ್ದಗಳು ಕಿವಿಗೆ ಬಿದ್ದ ಕೂಡಲೆ ಕೇಶವರಾವ ಮಾಸ್ತರರಿಗೆ ತಟ್ಟನೆ ಒಂದು ಸಂಗತಿಯು ನೆನಪಾಯಿತು. ಅವರು ಕೂಡಲೆ: "ಹಾಗಾದರೆ ಈಗ ನಾಲ್ಕು ದಿನಗಳ ಹಿಂದೆ ಸದಾಶಿವನ ಚಿಕ್ಕ ತಂಗಿಗೆ ಅಕ್ಕಿಯನ್ನು ಕೊಟ್ಟುಹೋದ ಬೈರಾಗಿಗಳು ನೀವೇ ಏನು?"

ಆ! ಏನೆಂದಿರಿ? ಅವಳು ಸದಾಶಿವನ ತಂಗಿಯೋ? ಎಂದು ಬೈರಾಗಿಯು ಚಕಿತನಾಗಿ ಅಂದನು. ಅಹಹಾ! ಹೇ, ದಯಾಘನ ಪ್ರಭೋ! ನಿನ್ನ ಅತರ್ಕ್ಯ ಲೀಲೆಗಳಿಗೆ ನನ್ನ ಶತಶಃ ಪ್ರಣಾಮಗಳಿರಲಿ! ಎಂದು ಗಂಭೀರ ಸ್ವರದಿಂದ ನುಡಿದು, ಆಕಾಶದ ಕಡೆಗೆ ನೋಡುತ್ತ, ಬೈರಾಗಿಯು ತನ್ನ ಎರಡೂ ಕೈಗಳನ್ನು ಜೋಡಿಸಿದನು. ಈಗ ನಾಲ್ಕು ದಿವಸಗಳಿಂದ ನಾನು ಒಂದೇಸಮನೆ ಸದಾಶಿವನ ಮನೆಯ ಪತ್ತೆಯನ್ನು ಹಚ್ಚಬೇಕೆಂದು ತಿರುಗುತ್ತಲಿರುವೆನು; ಮತ್ತು ಈ ನಾಲ್ಕು ದಿವಸಗಳಲ್ಲಿ ಆ ಮನೆಯ ಮೇಲಿಂದ ಹತ್ತಿಪ್ಪತ್ತು ಸಾರೆ ಹಾಯ್ದು ಬಂದರೂ ಅದರ ವಿಷಯವಾಗಿ ಯಾರನ್ನೂ

ಕೇಳಲಿಲ್ಲ; ಆದರೆ ಅದೇ ನನಗೆ ಬೇಕಾದ ಮನೆಯಿರಬಹುದೆಂದು ನನಗೆ ಅನಿಸಿದ್ದು ನಿಜವು; ಮತ್ತು ನನ್ನ ಮನಸ್ಸು ನನ್ನನ್ನು ಅದೇ ಬೀದಿಯ ಕಡೆಗೆ ಮೇಲಿಂದ ಮೇಲೆ ಜಗ್ಗಿ ಒಯ್ಯುತ್ತಲಿತ್ತು.

"ಆದರೆ ನೀವು ಸದಾಶಿವನ ವಿಷಯವಾಗಿ ಇಷ್ಟೇಕೆ ಆಸ್ಥೆಯಿಂದ ಕೇಳುತ್ತಿರುವಿರಿ?"

"ಮಾಸ್ತರ ಸಾಹೇಬರೇ, ಆ ಕಥೆಯು ಬಹಳ ದೊಡ್ಡದಿರುವದು; ಮತ್ತು ನೀವು ಆ ಎಲ್ಲ ಸಂಗತಿಯನ್ನು ಮನಗೊಟ್ಟು ಕೇಳಿದರೆ ನಿಮಗಾದರೂ ಪೂರ್ಣ ನಂಬಿಗೆಯುಂಟಾಗುವದು."

"ಒಳ್ಳೇದು. ಹಾಗಾದರೆ ಒಳಗೆ ನಡೆಯಿರಿ ಶಾಲೆಯು ಬಿಟ್ಟು ಹೋಗಿದೆ. ಆದ್ದರಿಂದ ನಾವು ಇಲ್ಲಿಯೇ ಕುಳಿತು ಸ್ವಸ್ಥಚಿತ್ತದಿಂದ ಮಾತಾಡೋಣ "ಹೀಗೆಂದು ಕೇಶವರಾವ ಮಾಸ್ತರರು ಬೈರಾಗಿಯನ್ನು ಒಳಗೆ ಕರಕೊಂಡು ಹೋದರು.

ಮಾಸ್ತರ ಸಾಹೇಬ, ಈ ಸುದ್ದಿಯ ವಿಷಯವಾಗಿ ನಿಮಗೆ ಏನು ಗೊತ್ತಿರುವದು? ಹೀಗೆಂದು ಬೈರಾಗಿಯು ತನ್ನ ಜೋಳಿಗೆಯೊಳಗಿಂದ ಒಂದು ಹಳೇ 'ಇಂದುಪ್ರಕಾಶ' ದೈನಿಕ ಪತ್ರದ ಅಂಕವನ್ನು ತೆಗೆದು ಅವನ ಕೈಯಲ್ಲಿ ಕೊಟ್ಟನು ಕೇಶವರಾಯರು ಅದನ್ನು ಕೈಯಲ್ಲಿ ತೆಗೆದುಕೊಂಡು, ಬೈರಾಗಿಯು ತನ್ನ ಬೆರಳಿನಿಂದ ತೋರಿಸಿದ ಸಂಗತಿಯನ್ನು ಓದಲಾರಂಭಿಸಿದರು. ಮೊದಲು ಅವರು ಆ ವೃತ್ತಪತ್ರವು ಎಷ್ಟನೆಯ ತಾರೀಖಿನದಿರುವದೆಂದು ನೋಡಿದರು. ಅದು ೧೯೧೫ನೇ ಇಸ್ವಿಯ ಎಪ್ರಿಲ್ ೧೧ನೇ ತಾರೀಖಿನದಾಗಿತ್ತು. ಅದರಲ್ಲಿ ಕೆಳಗೆ ಬರೆದ ಸಂಗತಿಯು ಇತ್ತು:—

ಆತ್ಮಹತ್ಯೆ—"ನಿನ್ನಿನ ದಿವಸ ರಾತ್ರಿ ಇಲ್ಲಿಯ ಮೈದಾನದ ಬಾವಿಯಲ್ಲಿ ಬಿದ್ದು, ಗೋವಿಂದ ತ್ರ್ಯಂಬಕ ವೈಶಂಪಾಯನನೆಂಬ ಹೆಸರಿನ ೩೬ ವರ್ಷದ ವಯಸ್ಸಿನ ಮನುಷ್ಯನು ಜೀವ ಕೊಟ್ಟನು.

ಬಡತನಕ್ಕಾಗಿ ಪ್ರಪಂಚಕ್ಕೆ ಬೇಸತ್ತು ಅವನು ಜೀವಕೊಟ್ಟನೆಂದು ಜ್ಯೂರಿಗಳು (ಪಂಚರು) ತಮ್ಮ ಮತ ಕೊಟ್ಟರು ''

ಈ ಸಂಗತಿಯನ್ನು ಓದಿದ ಮೇಲೆ ಕೇಶವರಾಯರು, ಈ ಸುದ್ದಿಯು ನನಗೆ ಗೊತ್ತಿರುವದು. ಅವನೇ ಸದಾಶಿವನ ತಂದೆಯು. ಆ ಮಾತಿಗೆ ಇವತ್ತಿಗೆ ಹನ್ನೆರಡು ವರ್ಷಗಳು ಅಂದರೆ ಒಂದು ತಪ ವಾಯಿತು. ಈ ಹನ್ನೆರಡು ವರ್ಷಗಳಲ್ಲಿ ಸದಾಶಿವನ ತಾಯಿಯು ಎಷ್ಟು ಪರಿ ಕಷ್ಟಪಟ್ಟು ದಿವಸಗಳನ್ನು ಕಳೆದಳೆಂಬದನ್ನು ಹೇಳಲು ಕುಳಿತರೆ ಇಡಿ ದಿವಸವೂ ಸಾಲದು. ಹೀಗೆಂದು ಕೇಶವರಾಯರು ಅಂದಿನವರೆಗೆ ಒದಗಿದ ಎಲ್ಲ ಸಂಗತಿಯನ್ನು ಸಾರಾಂಶರೂಪದಿಂದ ಕ್ರಮಕ್ರಮವಾಗಿ ಬೈರಾಗಿಗೆ ಹೇಳಿದರು. ಆ ಎಲ್ಲ ಸಂಗತಿಯನ್ನು ಅವನು ಶಾಂತಚಿತ್ತದಿಂದ ಕೇಳಿಕೊಂಡನು; ಮತ್ತು ಅದಕ್ಕೆ ಒಂದೇ ವಾಕ್ಯದಿಂದ ಉತ್ತರ ಕೊಟ್ಟನು; ಆದರೆ ಕೇಶವರಾಯರ ಮನಸ್ಸಿನ ಮೇಲೆ ಆ ವಾಕ್ಯದಿಂದ ಮಿಂಚಿನಗಿಂತ ಹೆಚ್ಚಿನ ಪರಿಣಾಮ ವಾಯಿತು!

''ಏನು, ನೀವೇ? ಆದರೆ ಈ ಮಾತು ಶಕ್ಯವಾದರೂ ಇದ್ದೀತೇ?''

''ಹೌದು. ನಾನು ಹೇಳುವದು ಅಕ್ಷರಶಃ ಸತ್ಯವಿರುತ್ತದೆ ''

''ಹಾಗಾದರೆ ನಡೆಯಿರಿ. ನಾವು ಈಗಿಂದೀಗಲೇ ಮನೆಗೆ ಹೋಗೋಣ. ಆ ಬಡ ಸಾಧ್ವಿಯು ಇದುವರೆಗೆ ಅನುಭವಿಸಿದ ದುಃಖಗಳು—''

ಕೇಶವರಾಯರೇ, ನಾವು ಹೀಗೆ ಒಮ್ಮೆಂದೊಮ್ಮೆ ಮನೆಗೆ ಹೋಗುವದು ಒಳಿತಲ್ಲ ಮೊದಲು ನಾವು ಸದಾಶಿವನಿಗೆ ಏಕಾಂತ ದಲ್ಲಿ ಭೆಟ್ಟಿಯಾಗೋಣ. ಆ ಮೇಲೆ ಅವನ ಸಂಗಡ ಮನೆಗೆ ಹೋಗೋಣ.''

''ಆದರೆ ಸದಾಶಿವನು ಈಗ ಗುಡ್‌ಉಯಿಲ್‌ಸಾಹೇಬರು

ಕರೆಕಳುಹಿಸಿದ ಮೇರೆಗೆ ಕಿಲ್ಲೆಯಲ್ಲಿರುವ ಪಾಯಸ್ ಡಾ. ಸಾಹೇಬರ ದವಾಖಾನೆಗೆ ಹೋಗಿರುವನು.''

''ಹಾಗಾದರೆ ನಾವು ಅಲ್ಲಿಗೇ ಹೋಗಿ ಅವರಿಗೂ ಭೆಟ್ಟಿಯಾಗೋಣ. ಯಾಕೆಂದರೆ ನಿಮ್ಮ ಹೇಳಿಕೆಯ ಪ್ರಕಾರ ಅವರು ಸದಾಶಿವನ ನಿಜವಾದ ಹಿತಚಿಂತಕರಿರುವದರಿಂದ ಅವರಿಗೂ ಭೆಟ್ಟಿಯಾಗುವದು ನಮ್ಮ ಕರ್ತವ್ಯವಿದೆ.''

''ಹೌದು. ನೀವು ಅನ್ನುವದು ನಿಜವಿದೆ ಅವರಿಗೆ ಈ ಸಂಗತಿಯು ತಿಳಿದರೆ ನಿಜವಾಗಿ ಅತ್ಯಾನಂದವಾಗುವದು. ಹಾಗಾದರೆ ನಡೆಯಿರಿ, ನಾವು ಅಲ್ಲಿಗೇ ಹೋಗೋಣ'' ಹೀಗೆಂದು ಕೇಶವರಾಯರು ಕಿಸೆಯೊಳಗಿನ ಗಡಿಯಾರ ತೆಗೆದು ನೋಡಲು, ಅದರಲ್ಲಿ ಹನ್ನೊಂದು ಹೊಡೆಯಲಿಕ್ಕೆ ಇನ್ನೂ ಹತ್ತು ಮಿನೀಟುಗಳಿದ್ದವು. ಗಡಿಯಾರವನ್ನು ನೋಡಿ ಕೇಶವರಾಯರು:—ಈಗ ನಾವು ಹೊರಟರೆ ವಾದರದಲ್ಲಿ ನಮಗೆ ಹನ್ನೊಂದು ಗಂಟೆಯ ಗಾಡಿಯು ಸಿಗುವದು. ಅಂದರೆ ನಾವು ಅಲ್ಲಿಗೆ ಸರಿಯಾದ ವೇಳೆಗೆ ಹೋಗುವೆವು ಹಿಟ್ಟಿನ ಮೇಲೆ ಇಂದಿನ ದಿನವು ಶುಭದಿನವಿರುವದು!

———

## ೧೩ನೆಯ ಪ್ರಕರಣ.

# ವನಸ್ಪತಿಯ ಪ್ರಭಾವ!

ಸದಾಶಿವನು ಗೊತ್ತುಪಡಿಸಿದ ವೇಳೆಗೆ ಸರಿಯಾಗಿ ದವಾಖಾನೆಗೆ ಬಂದು ಮುಟ್ಟಿದನು ಗುಡ್‌ಉಯಿಲ್ ಸಾಹೇಬರೂ ಅದೇ ಅಲ್ಲಿಗೆ ಬಂದು ಕುಳಿತಿದ್ದರು. ರಾತ್ರಿಯಿಂದ ಅವರ ಬೆರಳಿಗೆ ಹೆಚ್ಚೆಚ್ಚು ವೇದನೆಯಾಗತೊಡಗಿತ್ತು. ಬಹಳ ಮಾಡಿ ತನ್ನ

ಬೊಟ್ಟಿನ ಎರಡನೆಯ ಗೆಣ್ಣಿನ ಮೇಲೂ ವಿಷದ ಪರಿಣಾಮವಾಗಿರ ಬಹುದೆಂದು ಅವರಿಗೆ ಅನಿಸಿತು; ಮತ್ತು ಡಾಕ್ಟರ ಸಾಹೇಬರು ಬೊಟ್ಟು ಪರೀಕ್ಷಿಸಿ ಅದರಂತೆಯೇ ತಮ್ಮ ಅಭಿಪ್ರಾಯವನ್ನು ಹೇಳಿ ದರು. ವಿಚಾರಮಾಡಿ ನೋಡಿದರೆ ನಿನ್ನೆಯೇ ಆ ಬೊಟ್ಟಿನ ಶಸ್ತ್ರ ಕ್ರಿಯೆಯನ್ನು ಮಾಡಿಸತಕ್ಕದ್ದಿತ್ತು.

ಸದಾಶಿವನು ಅಲ್ಲಿ ಹೋದ ಕೂಡಲೆ ಗುಡ್‌ಉಯಿಲ್ ಸಾಹೇ ಬರು ಅವನನ್ನು ಕರೆದು ತಮ್ಮ ಹತ್ತಿರ ಕುಳ್ಳಿರಿಸಿಕೊಂಡು:—

"ಸದಾಶಿವಾ, ನಾನು ಇವತ್ತಿನ ದಿವಸ ನಿನ್ನನ್ನು ಇಲ್ಲಿ ಯಾಕೆ ಕರೆ ಸಿದೆನೆಂಬದರ ಕಾರಣವು ನಿನಗೆ ಈಗ ತಿಳಿಯಬಹುದು. ಅದಕ್ಕಿಂತ ಮೊದಲು ನಿನಗೆ ಎಷ್ಟೋ ಸಂಗತಿಗಳ ವಿಷಯವಾಗಿ ಕೇಳಬೇಕಾಗಿತ್ತು; ಆದರೆ ಡಾ. ಸಾಹೇಬರು ನಿನ್ನಿನ ದಿವಸ ನಿನ್ನ ಸಂಬಂಧವಾಗಿ ಹೇಳಿದ ಸಂಗತಿಯ ಮೇಲಿಂದ ನಿನ್ನ ಮೇಲೆ ಭರ ವಸೆ ಇಡಲು ಏನೂ ಅಡ್ಡಿಯಿಲ್ಲವೆಂದು ನನಗೆ ತೋರುತ್ತದೆ. ನಾನು ನಿನಗೆ ಕೇಳುವದೇನಂದರೆ, ನಿನ್ನ ಮೇಲೆ ಯಾವದಾದ ರೊಂದು ವಿಷಯಕ್ಕೆ ವಿಶ್ವಾಸವಿಟ್ಟರೆ, ಮುಂದೆ ಅದರ ದೆಶೆಯಿಂದ ನನಗೆ ಪಶ್ಚಾತ್ತಾಪ ಪಡುವ ಪ್ರಸಂಗ ಬರಲಿಕ್ಕಿಲ್ಲವಷ್ಟೇ?"

"ಎಂದಿಗೂ ಇಲ್ಲ. ಪ್ರತಿಯೊಂದು ವಿಷಯದ ಬಗ್ಗೆ ಸದಾ ಚಾರದಿಂದ ನಡೆದು, ನಾನು ನಿಮ್ಮ ವಿಶ್ವಾಸಕ್ಕೆ ಪಾತ್ರನಿರುವೆನೆಂಬ ದನ್ನು ನಿಮ್ಮ ನಿದರ್ಶನಕ್ಕೆ ತಂದು ಕೊಡುವೆನು."

"ನಿನ್ನ ಈ ನಿಜವಾದ ಅಂತಃಕರಣದಿಂದ ಹೊರಟ ಶಬ್ದ ಗಳನ್ನು ಕೇಳಿ ನನಗೆ ಅತ್ಯಾನಂದವಾಯಿತು. ನಾನು ಇವತ್ತಿ ನಿಂದ ನಿನ್ನನ್ನು ನನ್ನ ಸ್ವಂತ ಕಂಪನಿಯಲ್ಲಿ ಕೆಲಸಕ್ಕೆ ಇಟ್ಟು ಕೊಂಡು, ನಿನ್ನ ಗೃಹಸ್ಥಿತಿಗೆ ಅನುಕೂಲವಾಗುವಂತೆ ನಿನಗೆ ಬೇಕಾದ ಸಂಬಳವನ್ನು ಕೊಡುತ್ತೇನೆ. ನಿನ್ನನ್ನು ನನ್ನ ಆಫೀಸಿ

ನಲ್ಲಿ ನನ್ನ ಕೈಕೆಳಗೇ ಕೆಲಸ ಮಾಡಲಿಕ್ಕೆ ಇಟ್ಟುಕೊಳ್ಳುತ್ತೇನೆ. ಆದ್ದರಿಂದ ನೀನು ಸೋಮವಾರದಿಂದ ನಮ್ಮ ಕಚೇರಿಗೆ ಬಂದು ಕೆಲಸ ಮಾಡು'' ಎಂದು ಹೇಳಿ ಗುಡ್‌ಉಯಿಲ್ ಸಾಹೇಬರು ಡಾಕ್ಟರರ ಕಡೆಗೆ ತಿರುಗಿ, 'ಏನು ಡಾ ಸಾಹೇಬರೇ, ನಾನು ಮಾಡಿದ ವ್ಯವಸ್ಥೆಯು ನಿಮ್ಮ ಮನಸ್ಸಿಗೆ ಬರುವದಿಲ್ಲವೇ?' ಎಂದು ಕೇಳಿದರು.

"ಓಹೋ, ಬರದೆ ಏನು ಮಾಡೀತು? ಬಹಳ ಉತ್ತಮವಾದ ವ್ಯವಸ್ಥೆಯಾಯಿತು.''

ಈ ಮೇಲೆ ಗುಡ್‌ಉಯಿಲ್ ಸಾಹೇಬರು:—ಒಳ್ಳೇದು, ಸದಾಶಿವರಾವ, ನೀನು ಇನ್ನೂ ಸ್ವಲ್ಪ ಹೊತ್ತು ನನ್ನ ಬಳಿಯಲ್ಲಿಯೇ ಕುಳಿತುಕೋ; ನಾನು ಇವತ್ತಿನ ದಿವಸ ಡಾ. ಸಾಹೇಬರ ಕಡೆಯಿಂದ ನನ್ನ ಈ ಬೆರಳಿನ ಶಸ್ತ್ರಕ್ರಿಯೆಯನ್ನು ಮಾಡಿಸುವವನಿದ್ದೇನೆ. ನಾನು ನನ್ನ ಮಡ್ಡಮ್ಮನಿಗೆ ಇಲ್ಲಿಗೆ ಬೇಕಂತ ಬರಬೇಡವೆಂದು ಹೇಳಿದ್ದೇನೆ; ಆದರೆ,—ಗುಡ್‌ಉಯಿಲ್ ಸಾಹೇಬರು ಇಷ್ಟು ಮಾತಾಡುವದರೊಳಗೆ ಹೊರಗಿನ ಪಾವಟಗೆಗಳ ಮೇಲಿಂದ ಯಾರೋ ಏರಿ ಬರುವ ಸಪ್ಪಳವು ಕೇಳಿಸಿತು; ಮತ್ತು ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಗುಡ್‌ಉಯಿಲ್ ಸಾಹೇಬರ ಮಡಮ್‌ಸಾ. ಮೇಲೆ ಹತ್ತಿ ಬಂದಳು.

ಪ್ರಿಯಳೇ, ನಿನಗೆ ಇಲ್ಲಿಗೆ ಬರಬೇಡವೆಂದು ನಾನು ಮೇಲಿಂದ ಮೇಲೆ ಹೇಳಿದ್ದರೂ ನೀನು ಮತ್ತೆ ಏಕೆ ಬಂದೆ?

ಡಿಯರ್, ನಾನು ಬರಲಿಕ್ಕಿಲ್ಲವೆಂದು ನಿಮಗೆ ಹೇಗೆ ಅನಿಸಿತು? ಇಲ್ಲಿ ನಿಮ್ಮ ಬೆಟ್ಟಿನ 'ಆಪರೇಶನ್'ವಾಗಿ ನೀವು ತೊಳಲುತ್ತ ಕುಳಿತಿರಲು, ನಾನು ಸುಮ್ಮನೆ ಮನೆಯಲ್ಲಿ ಕೂಡಲ್ಯಾ? ಇದು ಎಂದಾದರೂ ಶಕ್ಯವಿದೆಯೋ? ಆದರೆ ಡಾಕ್ಟರ ಸಾಹೇಬರೇ, ಜಾರ್ಜನ

ಬೊಟ್ಟಿನ ಆಪರೇಶನ್ ಮಾಡಿಸಲಿಕ್ಕೇ ಬೇಕೇನು? ಔಷಧದಿಂದ ಅದು ನೆಟ್ಟಗಾಗಲಿಕ್ಕಿಲ್ಲವೇ?

“ಮೊದಲೇ ಒಂದು ವೇಳೆ ಇಷ್ಟು ನಿಷ್ಕಾಳಜಿಯು ಆಗದಿದ್ದರೆ ಅದು ಔಷಧದಿಂದ ನೆಟ್ಟಗಾಗುತ್ತಿತ್ತು; ಆದರೆ ಈಗ ಮಾತ್ರ ‘ಆಪರೇಶನ್’ ಮಾಡಿದ ಹೊರ್ತು ಗತಿಯಿಲ್ಲ. ಇಷ್ಟೇ ಅಲ್ಲ, ಆದರೆ ಇವತ್ತಿನ ದಿವಸ ಗುಡ್‌ಉಯಿಲ್ ಸಾಹೇಬರ ಬೆರಳನ್ನು ಬೊಡ್ಡೆಯಿಂದ ಕೊಯ್ದು ತೆಗೆಯಲಿಕ್ಕೆ ಬೇಕು.”

“ಏನು? ಬೊಡ್ಡೆಯಿಂದಲೇ?” ಅಯ್ಯೋ!! ಪ್ರಿಯಕರ ಜಾರ್ಜರೇ, ನೀವು ಈ ದುಃಖವನ್ನು ಹೇಗೆ ಸಹಿಸುವಿರಿ? ...... ...... ದೇವರೇ, ನಮ್ಮ ಮೇಲೆ ಇದೆಂಥ ಪ್ರಸಂಗ ತಂದೆ?” ಎಂದು ಮಡಮ್‌ನು ಭೀತಿಯುಕ್ತ ಉದ್ಗಾರಗಳನ್ನು ತೆಗೆದಳು.

“ವಾಹವ್ವಾ! ನೀನು ಈಗಿನಿಂದಲೇ ಕೈ-ಕಾಲು ‘ಅಳಕೊಳ್ಳ ಹತ್ತಿದೆ! ಹಾಗಾದರೆ ನಾನು ಈ ದುಃಖವನ್ನು ಮುಂದೆ ಹೇಗೆ ಸಹಿಸಲಿ?”

“ಆದರೆ ಡಾ. ಸಾಹೇಬರೇ, ನೀವು ಜಾರ್ಜನಿಗೆ ‘ಆಪರೇಶನ್’ ಮಾಡುವ ಮುಂದೆ ಕ್ಲೋರೋಫಾರ್ಮ (ಎಚ್ಚರಗೆಡಿಸುವ ಔಷಧ)ವನ್ನು ಕೊಡುವಿರೋ-ಇಲ್ಲವೋ?”

“ಕೊಡದೆ ಏನು ಮಾಡಲಿ? ಇದೇ ಈಗ ನನ್ನ ಅಸಿಸ್ಟಂಟನು ಬರುವನು.”

“ಥ್ಯಾಂಕ ಗಾಡ್! ಆದರೆ ಜಾರ್ಜ! ನಿಮ್ಮ ಹೆಬ್ಬು ಬೊಟ್ಟು ಹೋದಮೇಲೆ ಕೈಯು ಎಷ್ಟು ಭಣ ಭಣ ಕಾಣಿಸುವದು?”

“ಭಣಗುಟ್ಟಿದರೆ ಏನು ಮಾಡಬೇಕು? ನಿಷ್ಕಾಳಜಿಯ ಪರಿಣಾಮವನ್ನು ಅನುಭವಿಸಲಿಕ್ಕೇ ಬೇಕು; ಆದರೆ ‘ಆಪರೇಶನ್ನ’ದ ಸಮಯಕ್ಕೆ ನೀನು ಇಲ್ಲಿಂದ ಹೊರಗೆ ಹೋಗುವದು ಬಹಳ ನೆಟ್ಟಗೆ.

ನಿನ್ನ ಕಡೆಯಿಂದ ಅದನ್ನು ನೋಡುವದಾಗಲಿಕ್ಕಿಲ್ಲ." ಆದರೆ ಮಡಮ್ ಸಾಹೇಬರು ಈ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ.

"ಜಾರ್ಜ, ನಿನ್ನೆ ನೀವು ಸದಾಶಿವನೆಂಬ ಒಬ್ಬ ಹುಡುಗನ ವಿಷಯವಾಗಿ ಹೇಳಿದ್ದಿರಿ ಆ ಹುಡುಗನು ಇವನೇ ಏನು?" ಎಂದು ವಿಷಯವನ್ನು ಬದಲಿಸಬೇಕೆಂದು ಮಡಮ್‌ನು ಅಂದಳು. ನನಗೆ ಈ ಹುಡುಗನನ್ನು ಕಂಡು ಸಂತೋಷವಾಯಿತು.

ಏನೋ ಸದಾಶಿವಾ, ಜಾರ್ಜ ಇವರು ಈಗ 'ಆಪರೇಶನ್' ಮಾಡಿಸಿಕೊಳ್ಳುವರು ಇದು ನಿನಗಾದರೂ ವಿಷಾದವೆನಿಸುತ್ತದಲ್ಲವೇ?

"ಮಡಮ್ ಸಾಹೇಬರೇ, ನನಗೆ ಬಹಳ ಅಸಮಾಧಾನವೆನಿಸುತ್ತದೆ; ಆದರೆ ಮಾಡುವದೇನು? ಸಾಹೇಬರ ಬೊಟ್ಟು ಕೊಯ್ದು ತೆಗೆಯಲಿಕ್ಕೇ ಬೇಕು ಇಲ್ಲದಿದ್ದರೆ ಇಡೀ ಕೈಗೆ ವಿಷ ಬಾಧೆಯಾಗುವದೆಂದು ಡಾಕ್ಟರ ಸಾಹೇಬರು ಅನ್ನುತ್ತಾರೆ."

ಈ ಮೇರೆಗೆ ಅವರ ಮಾತು ನಡೆದಿರಲು, ಅಲ್ಲಿಗೆ ಡಾಕ್ಟರ ಸಾಹೇಬರ ಅಸಿಸ್ಟಂಟನು ಬಂದನು. ಡಾಕ್ಟರಸಾಹೇಬರು ಅವನಿಗೆ ಕೆಲವು ಸೂಚನೆಗಳನ್ನು ಮಾಡಿದ ಮೇಲೆ ಅವನು ಶಿಪಾಯಿಯನ್ನು ಒದರಿ ಕರೆದನು. ಅತ್ತ ಕಡೆಯಲ್ಲಿ ಮಡಮ್ಮನು ತನ್ನ ಪತಿಯ ಅಂಗಿಯನ್ನು ಕಳೆದಿಡಲಿಕ್ಕೆ ನೆರವಾಗಹತ್ತಿದಳು. ಅವಳಿಗೆ ಆಪರೇಶನ್ನದ ಹೆದರಿಕೆಯಿದ್ದರೂ, ತನ್ನ ಪತಿಯು ಸಂಕಟ ಸಮಯದಲ್ಲಿ ಅವನ ಬಳಿಯಲ್ಲಿರುವೆನೆಂದು ನೆನೆದು, ಅವಳಿಗೆ ಒಂದು ರೀತಿಯಿಂದ ಸಮಾಧಾನವೆನಿಸಿತು; ಆದರೆ ಅವಳ ಈ ಮನೋಸ್ಥಿತಿಯು ಬಹಳ ವೇಳೆಯವರೆಗೆ ಬಾಳಲಿಲ್ಲ; ಯಾಕೆಂದರೆ ಅಲ್ಪ ವೇಳೆಯಲ್ಲಿಯೇ ಶಿಪಾಯಿಯು ಹತ್ತಿರದಲ್ಲಿದ್ದ ಸ್ಫಟಿಕದ ಸಣ್ಣ ಮೇಜಿನ ಮೇಲೆ ಸಣ್ಣ-ದೊಡ್ಡ ಹದನಾದ ಚಕಚಕಿಸುವ ಶಸ್ತ್ರ

ಗಳನ್ನು ತೆರೆದಿಟ್ಟ ಕೂಡಲೆ ಅವಳ ಎದೆಯು ಧಡಧಡನೆ ಹಾರಹತ್ತಿತು. ಅವಳಿಗೆ ದುಃಖವೂ ಉತ್ತರಿಸಿತು. ಕೂಡಲೆ ಅವಳು ತನ್ನ ಪ್ರಿಯ ಪತಿಯ ಕೊರಳಿಗೆ ತೆಕ್ಕೆಬಿದ್ದು ಅಸ್ಪಷ್ಟ ಧ್ವನಿಯಿಂದ: "ಜಾರ್ಜ, ನನ್ನ ಪ್ರಿಯಕರ ಜಾರ್ಜ, ನಿಮಗೆ ನಿಜವಾಗಿ ಅತಿ ದುಃಖವಾಗುವದು. ಇತ್ತ ನೋಡಿರಿ. ಈ ಶಸ್ತ್ರಗಳು ಎಷ್ಟು ಚಮಕಿಸುತ್ತವೆ! ಅಯ್ಯೋ ದೇವರೇ! ಇವುಗಳಿಂದ ನನ್ನ ಜಾರ್ಜನ ಬೊಟ್ಟು ಕೊಯ್ಯುವರಲ್ಲವೇ?" ಎಂದು ಆಕ್ರೋಶ ಮಾಡಹತ್ತಿದಳು.

ಕೂಡಲೆ ಡಾ. ಸಾಹೇಬರು, "ಮಿಸೆಸ್ ಗುಡ್‌ಉಯಿಲ್, ನೀವು ಇಲ್ಲಿಯೇ ಹತ್ತಿರದ ಕೋಣೆಯಲ್ಲಿ ಹೋಗಿ ಕುಳಿತರೆ ಬಹಳ ನೆಟ್ಟಗಾದೀತು. ಮಿಷ್ಟರ ಗುಡ್‌ಉಯಿಲ್‌ರಿಗೆ ಆಪರೇಶನ್ ಮಾಡುವ ಮುಂದೆ ಏನೂ ದುಃಖವಾಗುವದಿಲ್ಲ. ಆದರೂ ನೀವು ಅವರ ಹತ್ತರ ಇರುವದು ನೆಟ್ಟಗಲ್ಲ ನೀವು ಇಲ್ಲಿಗೆ ಬಂದದ್ದೇ ಮೊದಲು ತಪ್ಪು ಮಾಡಿದಿರಿ"

ಪ್ರಿಯಳೇ, ಡಾಕ್ಟರ ಸಾಹೇಬರು ಅನ್ನುವದು ನಿಜವದೆ. ಆದಗೆ ನೀನು ಇಲ್ಲಿಗೆ ಬಂದಿರುವಿಯೆಂದ ಮೇಲೆ ಉಪಾಯವಿಲ್ಲ. ಆ ಕೋಣೆಯಲ್ಲಿ ಹೋಗಿ ಕೂಡ್ರು ನೋಡೋಣ.

"ಜಾರ್ಜ........"

ಈಗ ಸುಮ್ಮನೆ ಯಾಕೆ ಹೊತ್ತು ಮಾಡುತ್ತಿರುವೆ? ಕ್ಷಣ ಕ್ಷಣಕ್ಕೆ ನನ್ನ ದುಃಖವು ಹೆಚ್ಚುತ್ತಲಿದೆಯೆಂಬದನ್ನು ಮರೆತೆಯಾ?

"ಆದರೆ ಜಾರ್ಜ...."

ಮುಂದೆ ಎಷ್ಟೋ ವೇಳೆ ಚನ್ನಾಗಿ ತಿಳಿಸಿ ಹೇಳಿದ ಮೇಲೆ ಮಡಮುಸಾಹೇಬರು ಕಣ್ಣು ಒರಿಸಿಕೊಳ್ಳುತ್ತ ಒಳಗಿನ ಕೋಣೆಯೊಳಗೆ ಹೋದರು. ನಮ್ಮ ಸ್ತ್ರೀಯರಿಗಿಂತ ಪಾಶ್ಚಿಮಾತ್ಯ ಸ್ತ್ರೀಯರು ಇಂಥ ಪ್ರಸಂಗಗಳಲ್ಲಿ ಎಷ್ಟೋ ಧಿಟ್ಟರಿರುತ್ತಾರೆಂದು

ನಾವು ಕೇಳಿದ್ದೇವೆ; ಮತ್ತು ಇದು ಎಷ್ಟೋ ಮಟ್ಟಿಗೆ ನಿಜವಿರುವದು. ಆದರೂ ಪ್ರತ್ಯಕ್ಷ ತನ್ನ ಮಮತೆಯ ಮನುಷ್ಯನ ಮೇಲೆ ಇಂಥ ಪ್ರಸಂಗವು ಬಂದರೆ ಯಾವ ಕೋಮಲ ಮನಸ್ಸಿನ ಸ್ತ್ರೀಯ ಮನಸ್ಸು ಕರಗಲಿಕ್ಕಿಲ್ಲ! ಮಡವ್‌ಸಾಹೇಬರು ಒಳಗ ಹೋದ ಕೂಡಲೆ ಡಾಕ್ಟರಸಾಹೇಬರು ಒಂದು ಪ್ರಶಸ್ತವಾದ ಖುರ್ಚಿಯ ಮೆ 'ಗುಡ್‌ಉಯಿಲ್ ಸಾಹೇಬರನ್ನು ಕುಳ್ಳಿರಿಸಿದರು. ಅವರ ಅಸಿಷ್ಟಂಟನು ಹತ್ತಿರದಲ್ಲಿಯೇ 'ಕ್ಲೋರೋಫಾರ್ಮದ' ಶಿಶೇಯನ್ನು ಹಿಡಿದುಕೊಂಡು ನಿಂತಿದ್ದನು ಅದರಾಚೆಯಲ್ಲಿ ಸದಾಶಿವನೂ, ಸಿಪಾಯಿಯೂ ನಿಂತಿದ್ದರು ಇನ್ನೊಂದು ಸ್ವಲ್ಪ ಹೊತ್ತಿನಲ್ಲಿ ಕ್ಲೋರೋಫಾರ್ಮವನ್ನು ಕೊಡತಕ್ಕವರಿದ್ದರು ಅಷ್ಟರೊಳಗೆ ಪಾವಟಿಗೆಗಳ ಮೇಲಿಂದ ಯಾರೋ ಏರಿ ಬರುವ ಸಪ್ಪಳವಾಯಿತು. ಯಾರು ಬಂದರೆಂಬದನ್ನು ನೋಡಲಿಕ್ಕೆ ಸಿಪಾಯಿಯು ಬಾಗಿಲದ ಕಡೆಗೆ ಹೊರಟನು. ಇಷ್ಟರಲ್ಲಿಯೇ ಕೇಶವರಾವ ಮಾಸ್ತರರೂ, ಅವರ ಹಿಂದಿಂದೆ ಒಬ್ಬ ಬೈರಾಗಿಯೂ, ಹೀಗೆ ಇಬ್ಬರೂ ಬಾಗಿಲ ಬಳಿಯಲ್ಲಿ ಬಂದು ನಿಂತರು. ಮಾಸ್ತರರನ್ನು ನೋಡಿದ ಕೂಡಲೆ ಸದಾಶಿವನು ಮುಂದಕ್ಕೆ ಬಂದನು. ಅವರನ್ನು ಕಂಡು ಅವನಿಗೆ ಅತಿ ಆಶ್ಚರ್ಯವೆನಿಸಿತು

"ಏನೋ ಸದಾಶಿವಾ, ನೀನು ಇಲ್ಲಿ ಇನ್ನೂ ಎಷ್ಟೊತ್ತು ಕೂಡ್ರ ಬೇಕಾದೀತು? ಆ ಸಾಹೇಬರು ಇವರೇ ಏನು?" ಎಂದು ಮಾಸ್ತರರು ಅವನನ್ನು ಮೆಲ್ಲಗೆ ಕೇಳಿದರು.

"ಹೌದು; ಆದರೆ ಇವತ್ತಿನ ದಿವಸ ಅವರ ಬೊಟ್ಟಿನ ಶಸ್ತ್ರಕ್ರಿಯೆಯಾಗುವದಿದೆ. ಅದಕ್ಕೆ ವಿಷಬಾಧೆಯಾಗಿದೆ."

ಆ ಬೈರಾಗಿಯು ಸದಾಶಿವನ ಮೋರೆಯ ಕಡೆಗೆ ಚಮತ್ಕಾರಿಕ,ಆದರೆ ಏಕಾಗ್ರಚಿತ್ತದಿಂದ ನೋಡುತ್ತಲಿದ್ದನು; ಆದರೆ ಸದಾ

ಶಿವನ ಬಾಯಿಯಿಂದ ಆ ಕಡೆಯ ವಾಕ್ಯವನ್ನು ಕೇಳಿದೊಡನೆ ಅವನು "ಏನು, ವಿಷಬಾಧೆಯಾಗಿರುವದೆ? ನಿನ್ನ ಹಿತಚಿಂತಕರ ಬೆರಳಿಗೆ ವಿಷದ ಬಾಧೆಯಾಗಿದ್ದು, ಡಾಕ್ಟರ ಸಾಹೇಬರು ಅವರ ಬೊಟ್ಟಿನ 'ಆಪರೇಶನ್' ಮಾಡುವರೇ? ಛೇ! ಛೇ!" ಎಂದು ನುಡಿದನು.

"ಸದಾಶಿವಾ, ಆ ಗೃಹಸ್ಥರು ಯಾರು? ನಿನಗೆ ಅವರ ಗುರುತು ಇರುವದೇನು?" ಎಂದು ಡಾ ಸಾಹೇಬರು ಒಳಗಿನಿಂದಲೇ ಕೇಳಿದರು

ಕೂಡಲೆ ಬೈರಾಗಿಯು ಮುಂದಕ್ಕೆ ಬಂದು: "ಹೌದು ಮಹಾ ರಾಜ, ತಾವು ಹ್ಯಾಗೆ ಸದಾಶಿವನ ಹಿತಚಿಂತಕರಿರುವಿರೋ, ಹಾಗೆಯೇ ನಾನಾದರೂ ಅವನ ಒಬ್ಬ ಹಿತಚಿಂತಕನಿರುವೆನು." ಎಂದು ಅಸ್ಖಲಿತವಾದ ಇಂಗ್ರಜೀ ಭಾಷೆಯಲ್ಲಿ ಉತ್ತರ ಕೊಟ್ಟನು.

"ಹಾಗಾದರೆ ಈ ವಿಷಯಕ್ಕೆ ನಿಮ್ಮದೇನು ಅಂಬೋಣ ವಿರುವದು?"

"ನೀವು ಈ ಸಾಹೇಬರ ಬೊಟ್ಟಿನ ಆಪರೇಶನ್ ಮಾಡ ಬೇಕೆಂದಿರುವಿರಿ; ಆದರೆ ಮೊದಲು ಈ ಬೊಟ್ಟಿಗೆ ವಿಷದ ಬಾಧೆ ಯಾಗಿರುವ ಕಾರಣವನ್ನು ನನಗೆ ತಿಳಿಸಿ ಹೇಳಿದರೆ, ನಾನು ಆ ಬೊಟ್ಟಿಗೆ ಯಾವ ತರದ ನೋವನ್ನೂ ಉಂಟು ಮಾಡದೆ, ಒಂದು ತರದ ದಿವ್ಯವಾದ ವನಸ್ಪತಿಯ ಔಷಧದಿಂದ ಅದನ್ನು ನೆಟ್ಟಗೆ ಮಾಡಲಿಕ್ಕೆ ಪ್ರಯತ್ನ ಮಾಡುವೆನು."

ಈ ಮಾತಿನಿಂದ ಅಲ್ಲಿ ನಿಂತವರೆಲ್ಲರೂ ಆಶ್ಚರ್ಯಚಕಿತ ರಾಗಿ ಆ ಬೈರಾಗಿಯನ್ನು ನೋಡುತ್ತ ನಿಂತರು ಇಷ್ಟರಲ್ಲಿಯೇ ಹತ್ತಿರದ ಕೋಣೆಯ ಬಾಗಿಲವನ್ನು ತೆರೆದು ಮಡಮ್‌ನೂ ಹೊರಗೆ ಬಂದಳು. ಅವಳು ಆ ಬೈರಾಗಿಯ ಭಾಷಣವನ್ನು ಕೇಳಿದ್ದಳು. ಅದರಿಂದ ಅವಳಿಗೆ ಅತಿ ಉತ್ಸಾಹ ಉಂಟಾಗಿ ಮುಂದೆ ಸರಿದು, "ಡಾ ಸಾಹೇಬರೇ, ಹೇಳಿರಿ-ಹೇಳಿರಿ. ಈ ಮನುಷ್ಯನಿಗೆ ಬೊಟ್ಟಿನ

ಸಂಬಂಧದ ಸರ್ವ ಸಂಗತಿಯನ್ನೂ ಹೇಳಿ. ನನ್ನ ಜಾರ್ಜನ ಬೊಟ್ಟು ಕೊಯ್ಯದೆ, ಅದು ನೆಟ್ಟಗಾದರೆ, ಅಹಹಾ! ದೇವರೇ ಅದು ಹೀಗೆ ಆದೀತೇ?.... ...''

ಡಾ. ಸಾಹೇಬರು ಎಲ್ಲ ಸಂಗತಿಯನ್ನು ಸ್ವಲ್ಪದರಲ್ಲಿಯೇ ತಿಳಿಸಿ ಹೇಳಿದರು. ಅದನ್ನು ಧೈರ್ಯಾಗಿಯೂ ಶಾಂತಚಿತ್ತದಿಂದ ಕೇಳಿ ಕೊಂಡು ಕೆಳಗೆ ಕುಳಿತನು; ಮತ್ತು ತನ್ನ ಜೋಳಿಯೊಳಗಿಂದ ನಾಲ್ಕೈದು ತರದ ವನಸ್ಪತಿಯ ಬೇರುಗಳನ್ನು ಹೊರಗೆ ತೆಗೆದನು. ಆ ಎಲ್ಲ ವನಸ್ಪತಿಗಳ ವಿಷಯಕ್ಕೆ ಅವನಿಗೆ ಚನ್ನಾಗಿ ಗೊತ್ತಿತ್ತು. ಅವುಗಳಲ್ಲಿ ಒಂದನ್ನು ಕೈಯಲ್ಲಿ ತಕ್ಕೊಂಡು ಅವನು ಡಾ. ಸಾಹೇಬರಿಗೆ ತೋರಿಸುತ್ತ, ''ಮಹಾರಾಜ, ಈ ಎಲ್ಲ ವನಸ್ಪತಿಯ ಬೇರುಗಳು ಹಿಮಾಲಯ ಪರ್ವತದ ಮೇಲೆ ಸಿಗುವವು. ಇವುಗಳನ್ನು ನನಗೆ ನಮ್ಮ ಗುರುಗಳು ಕೊಟ್ಟಿರುವರು! ಇವು ನನ್ನ ಗುರುವಿನ ಪ್ರಸಾದಗಳಿರುವವು! ಈ ವನಸ್ಪತಿಯಿಂದ ಬೇಕಾದಂಥ ಕಠಿಣ ರೋಗವಾದರೂ ವಾಸಿಯಾಗುವದು. ಈ ಸಾಹೇಬರ ಬೊಟ್ಟಿಗೆ ಆದ ವಿಷದ ಬಾಧೆಯನ್ನು ಈ ಬೇರಿನಿಂದ ನೆಟ್ಟಗೆ ಮಾಡುವೆನೆಂದು ನನಗೆ ಪೂರ್ಣ ವಿಶ್ವಾಸವಿದೆ. ನೀವು ನಿಮ್ಮ ಅನುಮತಿಯನ್ನಿತ್ತರೆ....''

''ನಾವು ನಮ್ಮ ಅನುಮತಿಯನ್ನು ಅತ್ಯಾನಂದದಿಂದ ಕೊಡುವೆವು. ಜಾರ್ಜ, ನಿಮ್ಮದೇನಾದರೂ ಈ ಮಾತಿಗೆ ಪ್ರತಿಬಂಧವಿಲ್ಲವಷ್ಟೆ?'' ಎಂದು ಮಡಮ್ಮನು ಮುಂದೆ ಬಂದು ಅಂದಳು.

''ಇಲ್ಲ; ಇಲ್ಲ! ಪ್ರಿಯಳೇ, ನಾನು ಎಂದಿಗೂ ಅಡ್ಡಿ ಮಾಡಲಾರೆನು; ಮತ್ತು ಬೊಟ್ಟು ಕೊಯ್ಯದೆ ನೆಟ್ಟಗೆ ಮಾಡಿದರೆ ಈ ಡಾಕ್ಟರ ಸಾಹೇಬರಾದರೂ ಅತಿ ಸಂತೋಷದಿಂದ ಇದಕ್ಕೆ ಒಪ್ಪಿಕೊಳ್ಳುವರೆಂದು ನನಗೆ ಪೂರ್ಣ ನಂಬಿಗೆಯಿದೆ.''

“ಇದಕ್ಕೆ ನನ್ನ ಪೂರ್ಣ ಒಪ್ಪಿಗೆಯಿರುವದು; ಮತ್ತು ಇದರಿಂದ ನನಗೆ ಸಂತೋಷವೂ ಉಂಟಾಗುವದು.” ಎಂದು ಡಾ. ಸಾಹೇಬರು ಅಂದರು.

“ಹಾಗಾದರೆ ಈ ಬೇರು ತೆಯ್ಯಲಿಕ್ಕೆ ಸ್ವಲ್ಪ ನೀರು ಮತ್ತು ಒಂದು ಸಾಣೇಕಲ್ಲು ಸಿಕ್ಕರೆ ನೆಟ್ಟಗಾದೀತು.”

ಸ್ವಲ್ಪ ಹೊತ್ತಿನೊಳಗೇ ಶಿಪಾಯಿಯು ಎಲ್ಲ ಸಾಹಿತ್ಯಗಳನ್ನು ತಂದಿಟ್ಟ ಮೇಲೆ, ಆ ಬೈರಾಗಿಯು ಬೇರನ್ನು ತೇಯ್ದು ಗುಡ್ ಉಯಿಲ್ ಸಾಹೇಬರ ಬೆರಳಿಗೆ ಸುತ್ತಿದ ಅರಿವೆಯನ್ನು ಬಿಚ್ಚಲಿಕ್ಕೆ ಹತ್ತಿದನು. ಅರಿವೆಯನ್ನು ಹೆಚ್ಚೆಚ್ಚು ಬಿಚ್ಚಿದಂತೆ ಕೊಳೆತ ಮಾಂಸದ ಕೆಟ್ಟ ನಾತವು ಹೊರಡಲಾರಂಭಿಸಿತು. ಬೈರಾಗಿಯು ಆ ಬೆರಳನ್ನು ಮೇಲೆ ಕೆಳಗೆ ಮಾಡಿ ನೋಡಿದನು. ಬೊಟ್ಟು ಬಹಳ ಬಾತಿತ್ತು ಆ ಮೇಲೆ ಅವನು ಗುಡ್‌ಉಯಿಲ್ ಸಾಹೇಬರ ನೋವಾದ ಕೈಯನ್ನು ತನ್ನ ತೊಡೆಯಮೇಲಿಟ್ಟುಕೊಂಡು, ಬಾತ ಬೆರಳಿನ ಮೇಲೆ ಆ ಔಷಧವನ್ನು ಹಚ್ಚಿದನು

ಆ ಮೇಲೆ ಒಂದು ಪಾತ್ರೆಯನ್ನು ತರಿಸಿ, ಅವನು ಸಾಹೇಬರಿಗೆ ಆ ಪಾತ್ರೆಯ ಮೇಲೆ ಬೊಟ್ಟು ಕೆಳಗೆ ಮಾಡಿ ಕೈಯನ್ನು ಮೇಲಕ್ಕೆತ್ತಿ ಹಿಡಿಯಲಿಕ್ಕೆ ಹೇಳಿದನು; ಮತ್ತು ಇನ್ನು ೨೪ ಮಿನಿಟು ಗಳಲ್ಲಿಯೇ, ಬೊಟ್ಟಿನೊಳಗಿನ ವಿಷವೆಲ್ಲ ನೀರಿನ ರೂಪದಿಂದ ತಟ ತಟ ಬೀಳುವದೆಂದೂ ಮತ್ತು ಅದಾದ ಕೂಡಲೆ ಬಾವು ಕಡಿಮೆಯಾಗಿ ಅದರ ವೇದನೆಯು ಪೂರಾ ಕಡಿಮೆಯಾಗುವದೆಂದೂ ಹೇಳಿದನು.

ಅಹಹಾ! ಹಿಮವತ್ಪರ್ವತದೊಳಗಿನ ದಿವ್ಯ ಔಷಧದ ಪ್ರಭಾವವನ್ನು ಎಷ್ಟೆಂದು ಹೇಳಲಿ?

ಇಂಥ ವನಸ್ಪತಿರಾಜನು ನಮ್ಮ ಭರತಭೂಮಿಯಲ್ಲಿರುವ

ನೆಂದ ಬಳಿಕ ನಮ್ಮ ಭಾಗ್ಯಕ್ಕೆಣೆಯುಂಟೇ? ಆದರೆ ಮನೆಯಲ್ಲಿದ್ದ ದ್ರವ್ಯದ ನಿಧಿಯನ್ನು ಕಣ್ಣೆತ್ತಿ ನೋಡದ ತಿರಿದುಣ್ಣುವ ದರಿದ್ರ ಪಾಪಿಯಂತೆ ನಮ್ಮ ಅವಸ್ಥೆಯಾಗಿದೆ ನಮ್ಮಲ್ಲಿ ಬೇಕಾದಷ್ಟು ವನಸ್ಪತಿಗಳು, ದಿವ್ಯ ಮಾತ್ರೆಗಳು ಇರುತ್ತಿರಲು, ನಾವು ಅವುಗಳ ಕಡೆಗೆ ಕಣ್ಣೆತ್ತಿ ನೋಡದೆ, ಪಾಶ್ಚಾತ್ಯರು ಹಾಕಿರುವ ಔಷಧದ ಅಂಗಡಿಗಳ ಕಡೆಗೆ ಧಾವಿಸುತ್ತೇವೆ ವಿದೇಶಿಯರು ಕೊಡುವ ಪ್ರಾಣಿಜನ್ಯ ಔಷಧಿಯನ್ನು ಎಗ್ಗಿಲ್ಲದೆ ಗಟಗಟನೆ ಕುಡಿಯುತ್ತೇವೆ. ಹಾಯ್-ಹಾಯ್! ನಮ್ಮ ಅಜ್ಞಾನಕ್ಕೆ ಧಿಃಕಾರವಿರಲಿ! ಈ ನಮ್ಮ ಅಜ್ಞಾನವೇ ನಮ್ಮನ್ನು ಹಾಳುಮಾಡಿರುವದು. ನಾವು ಪಾಶ್ಚಾತ್ಯ ಔಷಧವನ್ನು ಸೇವಿಸಹತ್ತಿದ್ದರಿಂದ ನಮ್ಮಲ್ಲಿಯ ನಾಮಾಂಕಿತ ವೈದ್ಯರು 'ಕಾಲಾಯ ತಸ್ಮೈ ನಮಃ|' ಎಂದು ತಮ್ಮ ಉದ್ಯೋಗ ವನ್ನು ಬಿಟ್ಟುಕೊಟ್ಟರು. ಆರ್ಯ ವೈದ್ಯವು ಹಿಂದೆ ಬಿದ್ದಿತು. ಈಗ ಎಲ್ಲಿ ನೋಡಿದರೂ ದವಾಖಾನೆಗಳು! ಪಾಶ್ಚಾತ್ ಔಷಧಿಯ ಬಾಟ್ಲಿಗಳು! ಇನ್ನಾದರೂ ನಮ್ಮ ಜನರು ಎಚ್ಚತ್ತರೆ ನಮ್ಮ ಧರ್ಮವು ಉಳಿಯುವದು; ಮತ್ತು ಆರ್ಯ ವೈದ್ಯಕವು ಪುನಃ ಚೇತರಿಸುವದು. ಯಾವ ಬೊಟ್ಟನ್ನು ಆಪರೇಶನ್ ಮಾಡಿದ ಹೊರ್ತು ಗತ್ಯಂತರವಿಲ್ಲೆಂದು ವಿಲಾಯತಿಯ ಪ್ರಸಿದ್ಧ ಡಾಕ್ಟರನು ಹೇಳಿದನೋ, ಅಂಥ ಬೊಟ್ಟನ್ನು ಕೇವಲ ಹಿಂದು ಬೇರಿನಿಂದ ನೆಟ್ಟಗೆ ಮಾಡುತ್ತೇನೆಂದು ನುಡಿದ ಬೈರಾಗಿಯ ವಿಶ್ವಾಸವು ಏತರ ಮೇಲೆ ಇರಬಹುದು? ವನಸ್ಪತಿಯ ದಿವ್ಯ ಪ್ರಭಾವದ ಮೇಲಲ್ಲವೇ?

ಸ್ವಲ್ಪ ವೇಳೆಯಲ್ಲಿಯೇ ಆ ಬೈರಾಗಿಯು ಹೇಳಿದಂತೆ ಬೊಟ್ಟ ನೊಳಗಿಂದ ತಟ ತಟ ನೀರು ಸುರಿಯಹತ್ತಲು, ಅಲ್ಲಿ ನಿಂತ ಜನ ರೆಲ್ಲ ಆಶ್ಚರ್ಯಚಕಿತರಾಗಿ ಬೈರಾಗಿಯ ಗಂಭೀರವಾದ ಮುಖದ ಕಡೆಗೆ ಮಿಕಿ ಮಿಕಿ ನೋಡಹತ್ತಿದರು. ಅವನ ಮಾತಿನಂತೆ ಐದೇ

ಮಿನೀಟುಗಳಲ್ಲಿ ಅದರ ಬಾವು ಇಳಿದು, ನೋವಾದರೂ ಪೂರಾ ನಿಂತಿತು ಇಷ್ಟೇ ಅಲ್ಲ; ಆ ಬೊಟ್ಟು ಮೊದಲಿನಂತೆ ಅತ್ತಿತ್ತ ಮಣಿಸಲಿಕ್ಕೆ ಬರಹತ್ತಿತು.

ಇದನ್ನು ನೋಡಿ ಮಡಮ್ಮನು, "ಮಹಾರಾಜ, ಇನ್ನು ನಿಮ್ಮ ಉಪಕಾರವನ್ನು ಹೇಗೆ ತೀರಿಸೋಣ? ಇವತ್ತಿನ ದಿವಸ ನೀವು ನನ್ನ ಜಾರ್ಜನಿಗೆ ಹೊಸ ಬೊಟ್ಟು ಕೊಟ್ಟಂತಾಯಿತು" ಎಂದು ಕೃತಜ್ಞತಾಪೂರ್ವಕವಾಗಿ ನುಡಿದಳು.

ಇದಕ್ಕೆ ಬೈರಾಗಿಯು:—"ಮಡಮ್ ಸಾಹೇಬ, ಇದರಲ್ಲಿ ಉಪಕಾರವೇತರದು? ನಿಮ್ಮ ಪತಿರಾಜರು ಈ ನನ್ನ ಸದಾಶಿವನ ಮೇಲೆ ಅತಿ ಕಠಿಣವಾದ ಪ್ರಸಂಗದಲ್ಲಿ ಮಾಡಿದ ಸಹಾಯದ ಮುಂದೆ, ನಾನು ಮಾಡಿದ ಉಪಕಾರವು ಏನೂ ಇಲ್ಲ. ನೀವೆಲ್ಲರೂ ನನ್ನನ್ನು ಜನ್ಮವಿರುವವರೆಗೆ ಋಣಿಯಾಗಿರುವಂತೆ ಮಾಡಿರುವಿರಿ"

ಇದನ್ನು ಕೇಳಿ ಡಾಕ್ಟರರು: "ಇದರಲ್ಲಿ ನಿಮ್ಮದು ಹೇಗೆ ಸಂಬಂಧವು ಉಂಟಾಯಿತು?" ಎಂದು ಅಂದರು

"ಮಹಾರಾಜರೇ, ಸಂಬಂಧವೇನಿರುವದೆಂದು ಹೇಳಲಿ? ನಾನೇ ಸದಾಶಿವನ ದುರ್ದೈವಿಯಾದ ತಂದೆಯಿದ್ದೇನೆ"

"ಏನು, ನೀವು ಸದಾಶಿವನ ತಂದೆಯೇ?" ಎಂದು ಎಲ್ಲರ ಬಾಯಿಯಿಂದ ಉದ್ಗಾರಗಳು ಹೊರಟವು.

---

## ೧೪ನೆಯ ಪ್ರಕರಣ.

## ಒಳ್ಳೇ ದಿನ.



ಬಾಳಾ, ಸದಾಶಿವಾ ಇತ್ತ ಬಾ! ಮತ್ತು ಈ ನಿನ್ನ ದುರ್ದೈವಿಯಾದ ತಂದೆಯನ್ನು ಬಿಗಿದಪ್ಪು! ಹೀಗೆಂದು ಬೈರಾಗಿಯು ತನ್ನ

ಬಾಹುಗಳನ್ನು ಪಸರಿಸಿದ ಕೂಡಲೆ ಸದಾಶಿವನು ಚಟ್ಟನೆದ್ದು ಮುಂದಕ್ಕೆ ಜಿಗಿದನು ಬೈರಾಗಿಯು ಪಿತೃಪ್ರೇಮದಿಂದ ಮಗನನ್ನು ಆಲಿಂಗಿಸಿ ಎದೆಗೆ ಅವಚಿಕೊಂಡನು! ಆ ಪ್ರಸಂಗವನ್ನು ನೋಡಿ ಪ್ರತಿಯೊಬ್ಬರ ಕಣ್ಣೊಳಗಿಂದ ಪ್ರೇಮಾಶ್ರುಗಳು ಧಾರೆಗೊಂಡು ಹರಿದವು! ಎಲ್ಲರ ಆಶ್ಚರ್ಯದ ವೇಗವು ಕಡಿಮೆಯಾದ ಬಳಿಕ ಗೋವಿಂದರಾಯನು ಮಾತಾಡಲುಪಕ್ರಮಿಸಿದನು.

''ಮಹಾರಾಜ, ಆ ಮಾತಿಗೆ ಇಂದಿಗೆ ಸರಿಯಾಗಿ ಹನ್ನೆರಡು ವರ್ಷಗಳಾದವು. ಇವತ್ತಿನ ತಾರೀಖು ೧೧ನೇ ಎಪ್ರಿಲ್ ೧೯೨೭ ಇದ್ದು, ಅವತ್ತಿನ ತಾರೀಖು ೧೧ನೇ ಎಪ್ರಿಲ್ ೧೯೧೫ ಇತ್ತು. ಆ ದಿವಸವೇ ನನ್ನಂತೆ ದುರ್ದೈವಿಯಾದ ಒಬ್ಬ ಮನುಷ್ಯನು ಆತ್ಮಹತ್ಯೆ ಮಾಡಿಕೊಂಡನು. ಅವನು ವಯಸ್ಸಿನಿಂದ, ಎತ್ತರದಿಂದ ಮತ್ತು ಮೈಬಣ್ಣದಿಂದ ಸಾಧಾರಣವಾಗಿ ನನ್ನಂತೆಯೇ ಇದ್ದನು. ಅದ್ದರಿಂದ ಅವನು ನಾನೇ ಎಂದು ಜನರ ತಿಳುವಳಿಕೆಯಾಯಿತು.

''ಆದರೆ ಮನೆಯ ಜನರು ನಿಮ್ಮನ್ನು ಹೇಗೆ ಗುರುತಿಸಲಿಲ್ಲ?'' ಎಂದು ಡಾ. ಸಾಹೇಬರು ಕೇಳಿದರು

"ಮನೆಯವರೆಂದರೆ ಅಲ್ಲಿಗೆ ಯಾರು ಬರುವರು? ಸದಾಶಿವನನ್ನು ಹಡೆದವಳಂತೂ ಬಾಣಂತಿಯಾಗಿದ್ದು, ಅಂದಿಗೆ ಹನ್ನೆರಡೇ ದಿವಸಗಳಾಗಿದ್ದವು ಇದಲ್ಲದೆ ಅದೇ ದಿವಸ ರಾತ್ರಿ ಮನೆಯಲ್ಲಿ ಅಪಘಾತವಾಗಿ ಒಂದು ಹುಡುಗೆಯು ಸತ್ತಿತ್ತು. ಸದಾಶಿವನಂತೂ ಆಗ್ಗೆ ಆರೇ ವರ್ಷದ ಹುಡುಗನಿದ್ದನು. ಹೀಗಾಗಿ ನೆರೆಹೊರೆಯವರೇ ಕೆಲವರು ಆ ಪ್ರೇತವನ್ನು ನೋಡಲಿಕ್ಕೆಂದು ಬಂದಿದ್ದರು. ಅವರೇನೂ ಅದನ್ನು ಅಷ್ಟು ಗುರುತಿಸಲಿಲ್ಲ; ಮತ್ತು ಆ ಪ್ರೇತವನ್ನಾದರೂ ಒಂದೇ ದಿವಸವಿಟ್ಟು ಮರುದಿವಸ 'ಅದು ಯೂರೂ ದಿಕ್ಕಿಲ್ಲದ ಹೆಣವಿದೆ'ಯೆಂದು ಪಂಚರ ಸಮಕ್ಷಮ ನಿರ್ಣಯಿಸಿ, ಸರಕಾರೀ ರೀತಿಯಿಂದ ಅದರ ಅಂತ್ಯವಿಧಿಯನ್ನು ಮುಗಿಸಿಬಿಟ್ಟರು!''

“ಈ ಮಾತು ನಿಮಗೆ ಗೊತ್ತಾಗಿದ್ದರೂ ನೀವು ಮಂದಿಯನ್ನು ಸಂಶಯದಲ್ಲಿಯೇ ಯಾಕೆ ಕೆಡವಿದಿರಿ?”

“ಮಹಾರಾಜ, ಆ ಸಂಗತಿಯು ಬಹಳ ದೊಡ್ಡದಿರುವದು. ನನಗೆ ಆಗ ಜೀವವು ಬಲು ಬೇಸರವಾಗಿತ್ತು. ಎಲ್ಲಿಯೂ ನೌಕರಿ ಸಿಗಲಿಲ್ಲ. ಕುಟುಂಬವಂತೂ ದಿನದಿನಕ್ಕೆ ಬೆಳೆಯುತ್ತ ನಡೆದದ್ದರಿಂದ ನಾನು ತೀರ ಬೇಸತ್ತು ಹೋಗಿದ್ದೆನು.” ಇಷ್ಟರಲ್ಲಿಯೇ ಮಡಮ್‌ನು ನಡುವೇ ಬಾಯಿಹಾಕಿ, “ಆದರೆ ಈ ಮೇರೆಗೆ ಹನ್ನೆರಡು ವರ್ಷಗಳ ಮೇಲೆ ನಿಮ್ಮ ದರ್ಶನವಾದ ಕೂಡಲೆ ನಿಮ್ಮ ಹೆಂಡತಿಗೆ ಎಷ್ಟೊಂದು ಆನಂದವಾಗಿರಬಹುದು?” ಎಂದು ಅಂದಳು.

“ಮಡಮ್‌ಸಾಹೇಬರೇ, ಆ ಆನಂದವು ಇನ್ನೂ ಆಗತಕ್ಕದ್ದಿರುವದು ಯಾಕಂದರೆ ನಾನು ಇನ್ನೂ ವರೆಗೆ ಅವಳಿಗೆ ಇಲ್ಲವೆ ನನ್ನ ಉಳಿದ ಹುಡುಗರಿಗೆ ಭೆಟ್ಟಿಯಾಗಿಲ್ಲ.”

“ಇದು ನಿಜವೇ? ಹಾಗಾದರೆ ನೀವು ಇನ್ನು ಮುಂದೆ ಮನೆಗೆ ಹೋಗುವಿರೇನು?” ಹೀಗೆಂದು ಮಡಮ್‌ನು ತನ್ನ ಪತಿಯ ಕಡೆಗೆ ತಿರಿಗಿ: “ಹಾಗಾದರೆ ಜಾರ್ಜ, ನಾವೂ ಇವರ ಸಂಗಡ ಹೋಗೋಣ ನಡೆಯಿರಿ. ಇಂಥ ಆನಂದದ ಪ್ರಸಂಗಗಳನ್ನು ಕಾಣುವದು ತೀರ ಅಪರೂಪ; ಆದರೆ ಈಗ ನಿಮ್ಮ ಬೊಟ್ಟು ಹೇಗಿರುವದು?”

“ನನ್ನ ಬೊಟ್ಟೇ! ನನ್ನ ಬೊಟ್ಟಿಗೆ ಏನಾಗಿದೆ?” ಎಂದು ಬೆರಳನ್ನು ಅತ್ತಿತ್ತ ಹೊರಳಿಸುತ್ತ ಗುಡ್‌ಉಯಿಲ್ ಸಾಹೇಬರು ನಗುತ್ತ ಮಾತಾಡಿದರು. “ಈ ಬೊಟ್ಟಿಗೆ ಏನಾದರೂ ಆಗಿತ್ತೋ ಇಲ್ಲವೋ ಎಂಬದರ ಬಗ್ಗೆ ಕೂಡ ನನಗೆ ಈಗ ಸಂಶಯವುಂಟಾಗಿದೆ”

ಇದನ್ನು ಕೇಳಿ ಡಾಕ್ಟರರು ಗಂಭೀರಸ್ವರದಿಂದ—“ಹಾಗೆ

ಸಂಶಯು ಬರುವದು ಸ್ವಾಭಾವಿಕವಿದೆ ಈ ಔಷಧದ ಪ್ರಭಾವವೇ ಅಂಥ ಅದ್ಭುತವಾದದ್ದಿರುವದು! ಮಿಷ್ಟರ ಗುಡ್‌ಉಯಿಲ್, ಈ ಹಿಂದುಸ್ಥಾನ ದೇಶದೊಳಗಿನ ಹಿಮಾಲಯ ಪರ್ವತವೆಂದರೆ ಇಂಥ ಅದ್ಭುತ ಔಷಧಗಳ ಸಾಗರವೇ ಆಗಿದೆ. ಅಲ್ಲಿ ದೊರೆಯುವ ದಿವ್ಯ ಔಷಧಗಳ ಕಲ್ಪನೆಯನ್ನು ಸಹ ಮಾಡಲಿಕ್ಕೆ ಬರುವಂತಿಲ್ಲ. ಸಂಸ್ಕೃತ ಗ್ರಂಥಗಳಲ್ಲಿ ಅದರ ಸಮಗ್ರ ಉಲ್ಲೇಖವಿದೆ'' ಎಂದು ಅಂದರು.

''ಆದರೆ ಅಂಥ ಔಷಧಗಳು ಈಗ ಏಕೆ ಕಂಡು ಬರುವದಿಲ್ಲ?''

''ಅದಕ್ಕೆ ಅನೇಕ ಕಾರಣಗಳುಂಟು; ಆದರೆ ಸ್ವಲ್ಪದರಲ್ಲಿ ಹೇಳುವದೆಂದರೆ, ಈ ದೇಶದಲ್ಲಿ ವೈದ್ಯಕೀಯ ಅಭ್ಯಾಸವನ್ನು ಸಾಂಗೋಪಾಂಗವಾಗಿ ಮಾಡಲಿಕ್ಕೆ ತಕ್ಕ ಉತ್ತೇಜನವಿಲ್ಲ ಅಂತೆಯೇ ಈ ದಿವ್ಯ ವಿದ್ಯೆಯು ಹಿಂದಕ್ಕೆ ಬಿದ್ದಿದೆ ''

ಕೂಡಲೆ ಮಡಮ್‌ನು ನಡೆಯಿರಿ, ಇನ್ನು ನಾವು ಹೋಗೋಣ. ನಾವು ಮೊದಲು ಸದಾಶಿವನ ಸಂಗಡ ಹೋಗಿ, ಅವರ ಆ ಆನಂದದ ಪ್ರಸಂಗವನ್ನು ಕಣ್ಣುಟ್ಟು ನೋಡೋಣ!

ಬಳಿಕ ಶಿಪಾಯಿಯನ್ನು ಕಳಿಸಿ ಡಾ. ಸಾಹೇಬರು ಎರಡು ಟ್ಯಾಕ್ಸಿ ಮೋಟಾರಗಾಡಿಗಳನ್ನು ತರಿಸಿದರು. ಒಂದರಲ್ಲಿ ಗುಡ್‌ಉಯಿಲ್ ಸಾಹೇಬರು, ಅವರ ಪತ್ನಿಯು ಮತ್ತು ಡಾಕ್ಟರರು, ಹೀಗೆ ಮೂವರು ಕುಳಿತರು. ಮತ್ತೊಂದರಲ್ಲಿ ಬೈರಾಗಿ ಗೋವಿಂದ ರಾಯರು, ಮಾಸ್ತರರು ಮತ್ತು ಸದಾಶಿವನೂ ಕುಳಿತರು. ಮೋಟಾರ ಗಳೆರಡೂ ವೇಗದಿಂದ ಒಂದರ ಹಿಂದೊಂದು ಹೊರಟವು ಅವು ಬಾಯಿಖಳದ ಹತ್ತಿರ ಬಂದ ಕೂಡಲೆ ಡಾಕ್ಟರ ಸಾಹೇಬರು ಅವು ಗಳನ್ನು ನಿಲ್ಲಿಸಿ ಗುಡ್‌ಉಯಿಲ್ ಸಾಹೇಬರಿಗೆ ''ಈ ಆನಂದದಲ್ಲಿ ಭಾಗ ಪಡೆಯುವಂಥ ಇನ್ನೊಂದು ವ್ಯಕ್ತಿಯು ಇರುವದು. ನಮ್ಮ

ನರ್ಸ ಮೇರಿಯನ್ನು ಸಂಗಡ ಕರೆದುಕೊಂಡು ಹೋದರೆ ಅವಳಿಗಾದರೂ ಆನಂದವುಂಟಾಗುವದೆಂದು ನನಗೆ ನಂಬಿಗೆಯಿದೆ'' ಎಂದು ಅಂದರು.

ವಾಚಕರೇ, ಈ ಎಲ್ಲ ಹಿತಚಿಂತಕರೂ ದಾದರಕ್ಕೆ ಹೋಗಿ ಮುಟ್ಟುವದರೊಳಗಾಗಿಯೇ ನಾವು ಅಲ್ಲಿಗೆ ಹೋಗೋಣ ನಡೆಯಿರಿ ಅಗೋ ನೋಡಿ, ಕೈಯಲ್ಲಿ ಒಂದು ಪಾಕೀಟನ್ನು ಹಿಡಕೊಂಡು ಒಬ್ಬ ಯುವಕನು ಸದಾಶಿವನ ಮನೆಯ ಬಾಗಿಲವನ್ನು ಬಡಿಯುತ್ತಿರುವನು ಆಗ ಮಧ್ಯಾಹ್ನದ ೧ ಹೊಡೆಯುವ ಸಮಯವಾಗಿತ್ತು. ಆ ಯುವಕನ ಬಿನ್ನಿಕನೆ ಬೆವತ ಮುಖದ ಮೇಲಿಂದ ಅವನು ದೂರಿನಿಂದ ಪ್ರವಾಸ ಮಾಡಿ ಬಂದಿರುವನೆಂದು ನಿಮಗೆ ಸಹಜವಾಗಿ ಲಕ್ಷ್ಯಕ್ಕೆ ಬರಬಹುದು. ಅಲ್ಪ ವೇಳೆಯಲ್ಲಿಯೇ ಸಾವಿತ್ರಿಯು ಬಾಗಿಲ ತೆರೆದು ಹೊರಗೆ ಬಂದಳು; ಮತ್ತು ಆ ತರುಣನನ್ನು ಕಂಡಕೂಡಲೆ, ‘‘ಅವ್ವಾ, ಕೃಷ್ಣಕ್ಕನ ಗಂಡನು ಬಂದನು.'' ಎಂಬ ಉದ್ಗಾರಗಳು ಅವಳ ಬಾಯಿಂದ ಹೊರಟವು.

ತನ್ನ ಪತಿರಾಜನ ಆಗಮನವನ್ನು ಕೇಳಿ, ಕೃಷ್ಣೆಗೆ ಆದ ಆನಂದವನ್ನು ಬಣ್ಣಿಸಲಳವಲ್ಲ! ಅವಳು ಚಟಕ್ಕನೆ ತನ್ನ ಕೂಸನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡಳು. ತನ್ನ ಪ್ರಿಯ ಪತಿಯು ಒಳಗೆ ಕಾಲಿಟ್ಟ ಕೂಡಲೆ ತನ್ನ ತೊಡೆಯಮೇಲಿದ್ದ ತಮ್ಮ ಮುದ್ದು ಕೂಸನ್ನು ನೋಡಿ ಅವರಿಗೆ ಹಿಡಿಸಲಾರದಷ್ಟು ಆನಂದವಾಗಬೇಕೆಂದು ಅವಳು ಬಯಸುತ್ತಿದ್ದಳು; ಮತ್ತು ಅವಳ ಆ ಬಯಕೆಯು ಅಲ್ಪವೇಳೆಯಲ್ಲಿಯೇ ಪೂರ್ಣವಾಯಿತು ಸಾವಿತ್ರಿಯು ಕಾಲು ಮೋರೆ ತೊಳೆದುಕೊಳ್ಳಲಿಕ್ಕೆಂದು ಒಂದು ತಂಬಿಗೆ ನೀರನ್ನಿತ್ತಳು. ಕಾಲು ತೊಳೆದು ಶ್ರೀಪತರಾಯರು ಒಳಗೆ ಬಂದ ಕೂಡಲೆ ಮೊದಲು ಅವರ ದೃಷ್ಟಿಯು ಹೊಸದಾಗಿ ಹುಟ್ಟಿದ ಅವರ

ಮುದ್ದು ಕುವರನ ಮುಖದ ಕಡೆಗೇ ಹೋಗಿ ಕ್ಷಣಹೊತ್ತಿನ ವರೆಗೆ ಸ್ಥಿರವಾಗಿ ನಿಂತಿತು ಅಲ್ಲಿಂದ ಅವರು ತಮ್ಮ ದೃಷ್ಟಿಯನ್ನು ಪ್ರಿಯ ಪತ್ನಿಯ ಮುಗುಳು ನಗೆಯಿಂದ ಥಳಥಳಿಸುವ ಮೊಗದಾವರೆಯ ಕಡೆಗೆ ಹೊರಳಿಸಿದರು. ಆಗ ಅವರಿಬ್ಬರ ಹೃದಯದಲ್ಲಿ ಉಂಟಾದ ಆನಂದೋದ್ರೇಕವನ್ನು ವರ್ಣಿಸುವಷ್ಟು ಸಾಮರ್ಥ್ಯವು ಈ ಶುಷ್ಕವಾದ ಲೆಕ್ಕಣಿಕೆಯಲ್ಲಿಲ್ಲ! ಈ ಎಲ್ಲ ಸಂಗತಿಯು ಸ್ವಲ್ಪ ವೇಳೆಯಲ್ಲಿಯೇ ಸಂಭವಿಸಿತು. ಮುಂದೆ ಶ್ರೀಪತರಾಯರು ತಮ್ಮ ಬೇನೆಬಿದ್ದ ಅತ್ತೆಗೆ ಬಾಗಿ ನಮಸ್ಕರಿಸಿದರು. ಅದನ್ನು ಕಂಡು ಭಾಗೀರಥಿದೇವಿಯು ಪ್ರೇಮಾಶ್ರುಗಳಿಂದ ಕೂಡಿದವಳಾಗಿ, ತನ್ನ ಅಳಿಯನಿಗೆ ಆಶೀರ್ವದಿಸಿ ಕುಶಲ ಪ್ರಶ್ನೆಗಳನ್ನು ಕೇಳಿದ ಮೇಲೆ "ನಿಮಗೆ ಮೊನ್ನೆ ವರ್ಗವಾಗಿದ್ದು ಇಷ್ಟು ಬೇಗನೆ ಬರಲು ಹೇಗೆ ಅನುಕೂಲವಾಯಿತು?" ಎಂದು ಕೇಳಿದಳು.

"ಸದಾಶಿವನು ಬರೆದು ಹಾಕಿದ ಸವಿಸ್ತರ ಸಂಗತಿಯ ಪತ್ರವು ನನಗೆ ನಿನ್ನೆಯೇ ಬಂದು ಮುಟ್ಟಿತು. ಪತ್ರವನ್ನೋದಿ ನನ್ನ ಮನಸ್ಸಿಗೆ ಅತಿ ಅಸಮಾಧಾನವುಂಟಾಯಿತು ಇಲ್ಲಿಗೆ ಒಮ್ಮೆ ಬಂದು ಹೋಗಲಿಕ್ಕೇ ಬೇಕೆಂದು ಮನಸ್ಸು ಹಾತೊರೆಯಹತ್ತಿತು. ಆದರೂ ರಜೆಯು ಸಿಗುವ ಬಗೆ ಹೇಗೆ? ಎಂಬ ವಿಚಾರವು ಬಿತ್ತು. ಕಡೆಗೆ ಸದಾಶಿವನ ಕಡೆಯಿಂದ ಬಂದ ಪತ್ರವನ್ನು ರಾವಸಾಹೇಬರಿಗೆ ತೋರಿಸಿ ರಜೆಯನ್ನು ದಯಪಾಲಿಸಬೇಕೆಂದು ಬೇಡಿಕೊಳ್ಳಲು, ಅವರು "ಇದೊಂದು ಕರ್ಜತದ ಕಚೇರಿಯಲ್ಲಿಯ ಕೆಲಸವಿರುವದು. ಅದನ್ನು ತೀರಿಸಿಕೊಂಡು ನೀನು ಮರುದಿವಸವೇ ತಿರುಗಿ ಬಂದರೆ ನಿನಗೆ ಎರಡು ದಿವಸದ ರಜೆಯು ಸಿಗುವದು." ಎಂದು ಹೇಳಿದರು. ಅದಕ್ಕೆ ನಾನು ಒಡಂಬಟ್ಟು ನಿನ್ನಿನ ದಿವಸ ರಾತ್ರಿ ಹೊರಟು, ಒಂದು ಎತ್ತಿನ ಚಕ್ಕಡಿಯನ್ನು ಬಾಡಿಗೆ ಮಾಡಿಕೊಂಡು ಕರ್ಜತಕ್ಕೆ

ಬಂದೆನು; ಮತ್ತು ಎರಡೇ ತಾಸಿನಲ್ಲಿ ಅಲ್ಲಿಯ ಕೆಲಸ ಮುಗಿಸಿ ಕೊಂಡು ಹತ್ತುಗಂಟೆಯ ಗಾಡಿಯಿಂದ ಇಲ್ಲಿಗೆ ಬಂದೆನು.''

''ಹಾಗಾದರೆ ನಿಮಗೆ ಬಹಳ ತ್ರಾಸವಾಗಿದ್ದೀತು; ಮತ್ತು ಇನ್ನೂವರೆಗೆ ಊಟವು ಸಹ ಆಗಿರಲಿಕ್ಕಿಲ್ಲ'' ಎಂದು ಭಾಗೀರಥಿ ದೇವಿಯು ಅಂದಳು.

ಕರ್ಜತದಲ್ಲಿ ನಾನು ಒಬ್ಬ ಸ್ನೇಹಿತನ ಮನೆಯಲ್ಲಿ ಇಳಿದಿದ್ದೆನು; ಮತ್ತು ಅಲ್ಲಿಯೇ ಊಟ ತೀರಿಸಿಕೊಂಡು ಹೊರಟೆನು. ಕೂಡಲೆ ಸಾವಿತ್ರಿಯು ಶ್ರೀಪತರಾಯರ ಹತ್ತರ ಹೋಗಿ, ಸಲಿಗೆಯಿಂದ ಅವರ ಕೈಯನ್ನು ಹಿಡಿದು ''ಭಾವನವರೇ, ಈ ನಮ್ಮ ಯಶವಂತನನ್ನು ನೋಡುವಿರೇನು?'' ಹೀಗೆಂದು ತನ್ನ ಅಕ್ಕನ ಕಡೆಗೆ ಹೊರಳಿ:-ಅಕ್ಕಾ, ಕೂಸನ್ನು ಇತ್ತ ಕಡೆಗೆ ಕೊಡು. ಭಾವನವರೇ, ನರ್ಸಬಾಯಿಯು ಕೂಸಿಗೆ ಯಶವಂತನೆಂದು ಹೆಸರು ಇಟ್ಟಿರುವಳು. ಈ ಹೆಸರು ನಿಮ್ಮ ಮನಸ್ಸಿಗೆ ಬಂತೇನು? ಎಂಥ ಚಲೋ ಹೆಸರು ಇರುವದು ನೋಡಿರಿ! ನರ್ಸಬಾಯಿಯು ಈ ಕೂಸು ನಿಮಗೆ ಯಶಸ್ಸು ಕೊಡುವದೆಂದು ಹೇಳಿದಳು;

ಹೀಗೋ? ಹಾಗಾದರೆ ಸಾವಿತ್ರೀ, ನಿನ್ನ ಮಗನು ಯಶಸ್ವಿಯಾಗಿರುವನೆಂದು ಅನ್ನಬಹುದು! ಆ ಮೇಲೆ ತಮ್ಮ ಪತ್ನಿಯ ಕಡೆಗೆ ಹಾಸ್ಯ ಮುದ್ರೆಯಿಂದ ನೋಡುತ್ತ ಶ್ರೀಪತರಾಯರು, ಹೇಳ್ರೀದು ಸಾವಿತ್ರೀ, ನಿಮ್ಮ ಅಣ್ಣನು ಮನೆಯಲ್ಲಿ ಕಾಣುವದಿಲ್ಲವಲ್ಲ? ಹೊರಗೆ ಹೋಗಿರುವನೇನು? ಎಂದು ಕೇಳಿದರು.

ಶ್ರೀಪತರಾಯರ ಮಾತಿಗೆ ಉತ್ತರ ಕೊಡುವಷ್ಟರಲ್ಲಿಯೇ ಹೊರಗೆ ಎರಡು ಮೋಟಾರ ಗಾಡಿಗಳು ಬಂದು ನಿಂತವು. ಮೋಟಾರದ ಸಪ್ಪಳವನ್ನು ಕೇಳಿದ ಕೂಡಲೆ ಸಾವಿತ್ರಿಯು ಲಕ್ಷ್ಯವು ಅತ್ತ ಹೊರಳಿತು. ಮೊದಲಿನ ಮೋಟಾರದಲ್ಲಿ ಸಾಹೇಬರೂ, ಮಡ

ವ್ಮ್ಕನೂ ಕುಳಿತದ್ದನ್ನು ಕಂಡು, ಆ ಓಣಿಯೊಳಗಿನ ಜನರೆಲ್ಲ ಹೊರಗೆ ಬಂದು ತಮ್ಮ ತಮ್ಮ ಕಟ್ಟೆಗಳ ಮೇಲೆ ಗುಂಪಾಗಿ ನಿಂತರು ಶ್ರೀಪತ ರಾಯರೂ, ಸಾವಿತ್ರಿಯೂ ಹೊರಗೆ ಬಂದರು ಮೋಟಾರದಲ್ಲಿ ಬಂದವರ ಗುರತು ಹತ್ತಿದ ಕೂಡಲೆ ಸಾವಿತ್ರಿಯು ಒಳಗೆ ಓಡಿ ಪೋಗಿ ತನ್ನ ತಾಯಿಗೆ:—ಅವ್ವಾ, ನಮ್ಮ ಮನೆಗೆ ಎರಡು ಮೋಟಾರಗಳು ಬಂದಿರುವವು ಮುಂದಿನದಲ್ಲಿ ಡಾ ಸಾಹೇಬರೂ, ಸರ್ಜಬಾಯಿಯೂ, ಮತ್ತೊಬ್ಬ ಮಡಮ್‌ನೂ, ಸಾಹೇಬರೂ ಇರುವರು; ಮತ್ತು ಇನ್ನೊಂದು ಮೋಟಾರದಲ್ಲಿ ಅಣ್ಣನೂ, ಮಾಸ್ತರರೂ ಮತ್ತು ಅವತ್ತಿನ ದಿವಸ ನನ್ನ ಮುಂದೆ ಅಕ್ಕೀ ಸುರುವಿ ಹೋದ ಬೈರಾಗಿಯೂ ಇರುವರು.

ಸಾವಿತ್ರಿಯು ಇಷ್ಟು ಮಾತಾಡುವಷ್ಟರೊಳಗೆ ಎಲ್ಲರೂ ಒಳಗೆ ಬಂದರು ಭಾಗೀರಥಿದೇವಿಯು ಒಳಗೆ ಬರುವ ಪ್ರತಿಯೊಬ್ಬರ ಕಡೆಗೆ ವಿಸ್ಮಯಚಕಿತಳಾಗಿ ನೋಡುತ್ತಿದ್ದಳು. ಎಲ್ಲಕ್ಕೂ ಮೊದಲು ಕೇಶವರಾವ ಮಾಸ್ತರರು ಮುಂದಕ್ಕೆ ಬಂದು ನಿಂತು:-ಭಾಗೀರಥಿದೇವಿಯವರೇ, ಈವೊತ್ತು ಒಳ್ಳೇ ಶುಭ ದಿವಸವಿರುವದು. ಇವತ್ತಿನ ದಿವಸ ನಿಮಗೆ ಎಷ್ಟೋ ಸಂತೋಷದ ಸುದ್ದಿಗಳು ಗೊತ್ತಾಗುವವು ಈ ಮಡಮ್‌ಸಾಹೇಬರು ಆ ಎಲ್ಲ ಆನಂದದ ಸಂಗತಿಗಳನ್ನು ತಾವೇ ತಿಳಿಸಬೇಕೆಂದು ಇಲ್ಲಿಗೆ ಬಂದಿರುವರು. ಇವತ್ತಿನ ದಿವಸ ಗುಡ್‌ಉಯಿಲ್‌ಸಾಹೇಬರು ನಿಮ್ಮ ಮಗನನ್ನು ತಮ್ಮ ಕಡೆಗೆ ಕರೆಸಿದ್ದುದು ನಿಮಗೆ ಗೊತ್ತೇ ಇರುವದು. ಅವರು ನಿಮ್ಮ ಮಗನಿಗೆ ಸದಯಾಂತಃಕರಣದಿಂದ ತಮ್ಮ ಕಂಪನಿಯಲ್ಲಿ ಒಂದು ಕೆಲಸವನ್ನು ಹಚ್ಚಿಕೊಟ್ಟಿದ್ದಾರೆ ಇಂಥ ಮಮತೆಯು ದೊಡ್ಡ ಗೃಹಸ್ಥರ ಪತ್ನಿಯವರೇ ಈ ಮಡಮ್‌ಸಾಹೇಬರು; ಹೀಗೆಂದು ಮಾಸ್ತರರು ಅವರಿಬ್ಬರ ಗುರತು ಮಾಡಿಕೊಟ್ಟರು. ಆ ಮೇಲೆ

ಆ ಮಡಮ್‌ನು ಭಾಗೀರಥಿದೇವಿಯ ಕೈಯನ್ನು ಹಿಡಿದು ಶುದ್ಧ ಕನ್ನಡ ಭಾಷೆಯಿಂದ:- ಭಾಗೀರಥಿದೇವಿ, ಇವತ್ತಿನ ದಿವಸ ನಿಮ್ಮ ಹನ್ನೆರಡು ವರ್ಷದ ಉಗ್ರತಪಸ್ಸಿನ ಫಲಪ್ರಾಪ್ತಿಯಾಗಿರುವದು. ಆ ದಯಾಳುವಾದ ಪರಮಾತ್ಮನ ಪ್ರೀತಿಗೆ ಪಾತ್ರವಾದ ಪ್ರಾಣಿಗಳು ಕಡೆಗೆ ಸುಖಿಗಳಾಗಲಿಕ್ಕೇ ಬೇಕು. ಇವತ್ತಿನ ದಿವಸ ಎಪ್ರಿಲ್ ತಿಂಗಳದ ಹತ್ತನೇ ತಾರೀಖು ಇರುವದು. ಹನ್ನೆರಡು ವರ್ಷಗಳ ಹಿಂದೆ ಇದೇ ತಿಂಗಳದ ಇದೇ ತಾರೀಖಿನ ದಿವಸ, ನೀವು ಭಯಂಕರವಾದ ಸಂಕಟದಿಂದ-ಅಸಹ್ಯಕರವಾದ ಶಾರೀರಿಕ ಮತ್ತು ಮಾನಸಿಕ ಯಾತನೆಗಳಿಂದ-ಹಣ್ಣಾಗಿದ್ದಿರಿ; ಆದರೆ ಇವತ್ತಿನ ದಿವಸ ನೀವು ಅದರ ವಿರುದ್ಧ ಸ್ಥಿತಿಯಲ್ಲಿರುವಿರಿ. ದುಃಖಗಳ ಹಿಂದಿಂದೇ ಸುಖವು ಪ್ರಾಪ್ತವಾಗಬೇಕೆಂದು ದೇವರ ಸಂಕೇತವಿರುವದು. ಅವನು ಅನಾಥ ರಕ್ಷಕನೂ, ಅತ್ಯಂತ ದಯಾಳುವೂ, ನಮ್ಮೆಲ್ಲರ ಪಿತನೂ ಆಗಿದ್ದಾನೆ. ಅವನ ಅತರ್ಕ್ಯವಾದ ಲೀಲೆಗಳು ನಮ್ಮಂಥ ಅಜ್ಞರಾದ ಜನರಿಗೆ ತಿಳಿಯದಿದ್ದರೂ, ಅವನು ಬೇರೆ ಬೇರೆ ಬಗೆಗಳಿಂದ ತನ್ನ ಅಸ್ತಿತ್ವವನ್ನು ನಮ್ಮ ನಿದರ್ಶನಕ್ಕೆ ತಂದು ಕೊಡುತ್ತಾನೆ.

ನಾವು ಅನನ್ಯಭಾವದಿಂದ ಆತನಿಗೆ ಶರಣು ಹೋದರೆ, ಆ ದಯಾಳುವಾದ ಪರಮೇಶ್ವರನು ನಮ್ಮನ್ನು ಕಾಪಾಡುತ್ತಾನೆ. ಕಳೆದ ಹನ್ನೆರಡು ವರ್ಷಗಳಲ್ಲಿ ನೀವು ನಾನಾ ತರದ ವಿಪತ್ತುಗಳಿಗೆ ಈಡಾದರೂ, ಸದಾಚಾರದಿಂದ ನಡೆದದ್ದರಿಂದ ಆ ದೀನ ರಕ್ಷಕನು ಈಗ ನಿಮ್ಮ ಸಹಾಯಕ್ಕೆ ಇಷ್ಟು ಮಂದಿಯನ್ನು ಕಳಿಸುತ್ತಾನೆ. ಭಾಗೀರಥಿದೇವಿಯವರೇ, ನೀವು ಅತಿ ಸಂಕಟದಲ್ಲಿ ತೊಳಲುತ್ತಬಿದ್ದಾಗ ನಮ್ಮ ಜಾರ್ಜರ ಮನಸ್ಸಿನಲ್ಲಿ ಅಂತಃಕರಣವನ್ನೂ, ದಯೆಯನ್ನೂ ಹುಟ್ಟಿಸಿದವರಾರು? ಸರ್ವರ ತಂದೆಯಾದ-ದಯಾಘನನಾದ ಪರಮೇಶ್ವರನೇ ಅಹುದಲ್ಲವೇ? ಅವನೇ ನಿಮಗೆ ಈ ಎಲ್ಲ ಸಹಾಯಕ

ರನ್ನು ಕಳಿಸಿದನು, ಇಷ್ಟರಿಂದಲೇ ಅವನ ನ್ಯಾಯಪ್ರಿಯತೆಯು ತೀರಲಿಲ್ಲ; ಆದರೆ ಅವನು ಇದಕ್ಕಿಂತ ಶ್ರೇಷ್ಠವಾದ ಅಕಲ್ಪಿತ ವಾದ-ಸುಖವನ್ನು ನಿಮ್ಮ ಪಾಲಿಗೆ ತಂದು ಕೊಟ್ಟಿರುವನು ನಿಮಗೆ ಆ ನಿಜವಾದ ಸುಖದ ಪರಿಚಯ ಮಾಡಿಕೊಡಲಿಕ್ಕೆ ಮತ್ತು ಅದನ್ನು ಅನುಭವಿಸುತ್ತಿರುವಾಗ ಕಣ್ತುಂಬಾ ನೋಡಿ ಸಂತೋಷ ಪಡಲಿಕ್ಕೆ ನಾವೆಲ್ಲರೂ ಇಲ್ಲಿಯ ತನಕ ಬಂದಿದ್ದೇವೆ. ಭಾಗೀರಥಿ ದೇವೀ, ನಿಮಗೆ ಆ ಸುಖದ ಕಲ್ಪನೆಯಾಗುವದೇನು? ಛೇ! ಅದರ ಕಲ್ಪನೆಯಾಗುವದು ನಿಮಗೆ ಎಂದಿಗೂ ಶಕ್ಯವಿಲ್ಲ ಭಾಗೀರಥಿ ದೇವೀ, ಇಗೋ ನೋಡಿರಿ, ನಿಮ್ಮ ಅಕಲ್ಪಿತವಾದ ಭಾಪೀಸುಖ ವನ್ನು!! ಇವರೇ ನಿಮ್ಮ ಪತಿರಾಜರು!! ಹೀಗೆಂದು ಮಡಮ್‍ಸು ಅಲ್ಲಿಯೇ ನಿಂತ ಬೈರಾಗಿಯ ಕಡೆಗೆ ಬೊಟ್ಟು ಮಾಡಿ ತೋರಿಸಿದಳು.

ಆಗ ಆ ಬೈರಾಗಿಯು "ಭಾಗೀರಥೀ!" ಎಂದು ಹಿದರಿದನು.

ಭಾಗೀರಥಿದೇವಿಯು ಕನಸ್ಸಿನಲ್ಲಿ ಕಂಡಂತೆ ತೇಲುಗಣ್ಣು ಗಳಿಂದ ನೋಡುತ್ತ, 'ಯಾ-ರು?' ಎಂದು ಕಂಪಿತಸ್ವರದಿಂದ ನುಡಿದು ಮೂರ್ಛಿತಳಾದಳು. ಮಡಮ್‍ಸು ಇಷ್ಟೊತ್ತಿನ ವರೆಗೆ ತನ್ನ ಭಾಷಣವನ್ನು ಬೇಕಂತಲೇ ಬೆಳಿಸಿದ್ದಳು; ಯಾಕೆಂದರೆ ಅಷ್ಟೊತ್ತಿನ ವರೆಗೆ ಭಾಗೀರಥಿದೇವಿಯು ಮೃತನಾಗಿರುವನೆಂದು ತಿಳಿದ ತನ್ನ ಪತಿಯ ಮುಖದ ಅವಲೋಕನವನ್ನು ಮಾಡಿದರೆ ಅವಳ ಹೃದ ಯಕ್ಕೆ ಒಮ್ಮಿಂದೊಮ್ಮೆ ಪೆಟ್ಟು ತಗಲಲಿಕ್ಕಿಲ್ಲವೆಂದು ಅವಳಿಗೆ ಗೊತ್ತಿತ್ತು. ಈ ಹಂಚಿಕೆಯನ್ನು ಅವರೆಲ್ಲರೂ ಮೊದಲೇ ಮಾಡಿ ದ್ದರು; ಮತ್ತು ಅದರಂತೆಯೇ ಎಲ್ಲ ಸಂಗತಿಗಳೂ ಸಂಭವಿಸಿದವು. ಎಲ್ಲಕ್ಕೂ ಮೊದಲು ಕೇಶವರಾವ ಮಾಸ್ತರರು ಮಡಮ್‍ನ ಗುರುತು ಮಾಡಿಕೊಟ್ಟರು; ಆದರೆ ಆ ಪರಿಚಯ ಮಾಡಿಕೊಡುವಾಗ್ಗೆ ಭಾಗೀ ರಥಿದೇವಿಯ ಲಕ್ಷ್ಯವೆಲ್ಲ ಗೋವಿಂದರಾಯರ ಕಡೆಗೇ ಇತ್ತು.

ಅದೇ ಕ್ಷಣಕ್ಕೆ ಹಿಂದು ಗುಪ್ತ ಸುದ್ದಿಯು ಅವಳ ಸೂಕ್ಷ್ಮವಾದ ಮನಸ್ಸಿಗೆ ಹೋಗಿ ಮುಟ್ಟಿತು.

ಮಡಮ್‌ನ ಎಲ್ಲ ಮಾತು ಮುಗಿಯುವ ವರೆಗೆ ಆ ಪತಿ-ಪತ್ನಿಯರ ಪರಸ್ಪರ ಸೂಕ್ಷ್ಮವಾದ ಮನಸ್ಸುಗಳು ಹೆಸರು ಹೇಳಲು ಬಾರದಂಥ ಯಾವುದೋ ಹಿಂದು ಕೆಲಸವನ್ನು ಮಾಡುತ್ತಿದ್ದವು; ಆದರೆ ಭಾಗೀರಥಿದೇವಿಗೆ ಆ ವ್ಯಕ್ತಿಯ ಗುರತು ಮಾತ್ರ ಪೂರಾ ಹತ್ತಲಿಲ್ಲ. ಕಡೆಗೆ ಮಡಮ್ಮಳ ಮಾತುಗಳು ಮುಗಿದು ಗೋವಿಂದ ರಾಯರು ಅವಳಿಗೆ 'ಭಾಗೀರಥೀ' ಎಂದು ಹಿದರಿ ಕರೆದ ಕೂಡಲೆ ಆ ಗುರತಿನ ಶಬ್ದವು ಅವಳ ಕಿವಿಗೆ ಬಿದ್ದಂತಾಗಿ, ಅದೇ ಕಾಲಕ್ಕೆ ಅವಳ ಸೂಕ್ಷ್ಮ ಮನಸ್ಸಿಗೆ ಆ ಪತಿಯು ಪೂರಾ ಗುರತು ಹತ್ತಿತು. ಆಗ ಅವಳು ಆತ್ಮಾನಂದದಿಂದ ಮತ್ತು ಆಶ್ಚರ್ಯಚಕಿತಳಾಗಿ ಯಾರು? ಎಂಬ ಪ್ರಶ್ನೆ ಮಾಡಿದರೂ ಮುಂದೆ ಅವಳ ಮೈಮೇಲೆ ಎಚ್ಚರಿಕೆ ಉಳಿಯಲಿಲ್ಲ.

ಮುಂದೆ ಸ್ವಲ್ಪ ವೇಳೆಯಲ್ಲಿಯೇ ಡಾ. ಸಾಹೇಬರ ಪ್ರಯತ್ನ ಗಳಿಂದ ಭಾಗೀರಥಿದೇವಿಯು ಮೂರ್ಛೆಯಿಂದ ಎಚ್ಚತ್ತು ಮೇಲ ಕ್ಕೆದ್ದು ಕುಳಿತಳು; ಆಗ ಆ ಸರ್ವರಿಗೂ ಪರಸ್ಪರ ಭೆಟ್ಟಿಯಿಂದಾದ ಆನಂದವನ್ನು ಬಣ್ಣಿಸಲು ಅದಾರು ಸಮರ್ಥರು? ಇಂಥ ಆನಂದದ ದಿವಸವೇ ಶುಭದಿನವಲ್ಲವೇ?

---

೧೫ನೆಯ ಪ್ರಕರಣ.

# ಬೈರಾಗಿಯ ವೃತ್ತಾಂತ.

ನಾನು ಹೆಂಡಿರು-ಮಕ್ಕಳನ್ನು ಬಿಟ್ಟು ಏಕೆ ಹೋದೆನೆಂದು ನೀವು ಕೇಳುತ್ತೀರಲ್ಲವೇ? ಹಾಗಾದರೆ ಹೇಳುತ್ತೇನೆ ಕೇಳಿರಿ:—

“ನನ್ನ ಪೂರ್ವದ ಸಂಗತಿಯಂತೂ ನಿಮಗೆ ಗೊತ್ತೇ ಇರುವದು. ಆಗ ನನಗೆ ಒಂದರ ಹಿಂದೊಂದು ಸಂಕಟಗಳು ಎಡೆಬಿಡದೆ ಬೆನ್ನು ಹತ್ತಿದ್ದವು. ಹಗಲುಹೊತ್ತು ಕೆಲಸದ ಸಲುವಾಗಿ ಸೊಂಡೆಯೊಣಗಿಸಿಕೊಂಡು ಪಿರಿ ಪಿರಿ ತಿರುಗುವದು, ರಾತ್ರಿ ಮನೆಗೆ ಬಂದ ಕೂಡಲೆ ಉಸ್ಸೆಂದು ಹಾಸಿಗೆಯ ಮೇಲೆ ಬಿದ್ದುಕೊಂಡು ಬೆಳತನಕ ನಿದ್ರೆಯಿಲ್ಲದೆ ಹೊರಳಾಡುವದು; ಹೀಗೆಯೇ ನನ್ನ ಎಷ್ಟೋ ದಿವಸಗಳು ಕಳೆದು ಹೋದವು. ಕೆಲಸವು ಸಿಗದ್ದರಿಂದ ಸಾಲವು ಮೈಮೇಲೆ ಬಂದಿತು; ಮನೆಯ ಬಾಡಿಗೆಯೂ ಏರಿತು ಉದ್ರಿಯ ಅಂಗಡಿಯವನು ಕಾಳು ಮತ್ತು ಕಿರಾಣಿಯ ಜೀನಸುಗಳನ್ನು ಕೊಡದೆ, ಒಂದೇಸವನೆ ಮನೆಗೆ ಎಡತಾಕಹತ್ತಿದನು; ಅದರಿಂದ ಮನೆಯಲ್ಲಿ ಎಲ್ಲರೂ ಉಪವಾಸ ಬೀಳುವ ಪ್ರಸಂಗವು ಬರಹತ್ತಿತು. ಅದೇ ವೇಳೆಯಲ್ಲಿ ಇವಳು ಗರ್ಭಿಣಿಯಿದ್ದದರಿಂದ ನನಗೆ ಮನೆಯನ್ನು ಬಿಟ್ಟು ಪರಸ್ಥಳಕ್ಕೆ ಕಾಲು ಕಿತ್ತದಂತಾಗಿ, ನಾನು ವಿಲಕ್ಷಣವಾದ ಸಂಕಟದಲ್ಲಿ ಬಿದ್ದೆನು.”

ನಾನು ಮನೆಗೆ ಬರುವದೊಂದೇ ತಡ, ಸಣ್ಣ ಸಣ್ಣ ಮಕ್ಕಳೆಲ್ಲ “ಅಪ್ಪಾ ಹಸಿವೆ-ಅಪ್ಪಾ ಹಸಿವೆ,” ಎಂದು ಕೀಸರ-ಬಾಸರ ಹಿಡಿಸಿ ನನ್ನ ಸುತ್ತಲೂ ನೆರೆದು ಅಳುತ್ತಿದ್ದವು! ಆಗ ನನ್ನ ಮನಸ್ಸಿಗೆ ಅಸಹ್ಯಕರವಾದ ವೇದನೆಯುಂಟಾಗುತ್ತಿತ್ತು! ನಾನು ಅದನ್ನು ಎಷ್ಟೋಮಟ್ಟಿಗೆ ನುಂಗಿಕೊಂಡು ಮನದಲ್ಲಿಯೇ ಕೊರಗುತ್ತ ಕೂಡ್ರುತ್ತಿದ್ದೆನು ಕಡೆಗೆ ಇವಳು ಪ್ರಸೂತಳಾದಳು; ಆಗ ಮನೆಯಲ್ಲಿ ಒಂದು ಹಿಡಿ ಕಾಳು ಕೂಡಾ ಇದ್ದಿದ್ದಿಲ್ಲ. ಕೂಲಿ-ಕುಂಬಳಿಯನ್ನಾದರೂ ಮಾಡಿ ನಾಲ್ಕಾರು ಆಣೆಗಳನ್ನು ದೊರಕಿಸಲಿಕ್ಕೆ ಪ್ರಯತ್ನ ಮಾಡಿದೆನು; ಆದರೆ ಅದೂ ದೇವರ ಮನಸ್ಸಿಗೆ ಬಂದಂತೆ

ತೋರಲಿಲ್ಲ. ನಮ್ಮ ನೆರೆಮನೆಯಲ್ಲಿಯೇ ಹರಿಭಾವು ಮತ್ತು ಗೋಪಿಕಾಬಾಯಿ ಎಂಬ ಇಬ್ಬರು ದಂಪತಿಗಳು ವಾಸಮಾಡಿಕೊಂಡಿದ್ದರು. ಅವರು ಬಡವರಾಗಿದ್ದರೂ ಬಲು ಅಂತಃಕರಣದ ಸ್ವಭಾವದವರಾಗಿದ್ದರು. ನಮ್ಮ ಸ್ಥಿತಿಯು ಗೋಪಿಕಾಬಾಯಿಗೆ ಪೂರಾ ಗೊತ್ತಿತ್ತು. ಅವತ್ತಿನ ದಿವಸ ಅವರು ತಮ್ಮ ಪತಿಯ ಹತ್ತಿರ ಐದು ರೂಪಾಯಿಗಳನ್ನು ಇಸಕೊಂಡು ನಮಗೆ ಕೈಗಡವಾಗಿ ಕೊಟ್ಟರು. ನಾನು ಅವುಗಳಲ್ಲಿ, ಮೂರು ರೂಪಾಯಿಗಳ ಧಾನ್ಯವನ್ನೂ, ಒಂದು ರೂಪಾಯಿಯಲ್ಲಿ ಬಾಣಂತಿಗೆ ಅವಶ್ಯವಾಗಿ ಬೇಕಾದ ಸಾಮಾನುಗಳನ್ನೂ ತಂದು, ಒಂದು ರೂಪಾಯಿಯನ್ನು ಮೇಲುಖರ್ಚಿಗಾಗಿ ಇಟ್ಟುಕೊಂಡೆನು ಆ ರೂಪಾಯಿಗಳ ಮೇಲೆ ನಾವು ಎಂಟು ಹತ್ತು ದಿವಸಗಳನ್ನು ಹ್ಯಾಗಾದರೂ ಕಳೆದವು. ಕಡೆಗೆ ಕೂಸನ್ನು ತೊಟ್ಟಿಲೊಳಗೆ ಹಾಕುವ ದಿವಸವು ಬಂದೊದಗಿತು. ಕೈಯೊಳಗೆ ಒಂದು ಪೈ ಸಹ ಇಲ್ಲದ್ದರಿಂದ ನಾನು ತೀರ ಹಣ್ಣಾಗಿ ಹೋಗಿದ್ದೆನು ಸಂಸಾರವೆಂದರೆ ನನಗೆ ತೀರ ಹೇಸಿಕೆ ಇಟ್ಟಿತು; ಅದರೂ ನಿರಪರಾಧಿಗಳಾದ ಈ ಕೂಸುಗಳ ಮೋರೆಯ ಕಡೆಗೆ ನೋಡಿ, ನನಗೆ ವಿಪರೀತವಾದ ಕುಕರ್ಮವನ್ನು ಮಾಡಲಿಕ್ಕೆ ಮನಸ್ಸಾಗಲಿಲ್ಲ'' ಎಂದು ಗೋವಿಂದರಾಯನು ನುಡಿಯುತ್ತಿರಲು, ಮಡಮ್‌ನು ನಡುವೇ ಬಾಯಿ ಹಾಕಿ ''ಆ ಹೊತ್ತಿನಲ್ಲಿ ನಮ್ಮ ಜಾರ್ಜನಿಗೆ ನಿಮ್ಮ ಈ ಪರಿಸ್ಥಿತಿಯು ಗೊತ್ತಾಗಿದ್ದರೆ ಅವನು ನಿಮಗೆ ನಿಜವಾಗಿ ಕೆಲಸವನ್ನು ಕೊಡುತ್ತಿದ್ದನು'' ಎಂದು ಅಂದಳು.

ಹೌದು; ಆದರೆ ಮಡಮ್‌ಸಾಹೇಬರೇ, ನಮ್ಮ ಹಣೇಬರಹದಲ್ಲಿ ಬರೆದ ಈ ಗ್ರಹದೆಶೆಯ ಫಲವನ್ನು ನಾವು ಅನುಭವಿಸಿಯೇ ತೀರಬೇಕಾಗಿತ್ತಲ್ಲವೇ! ನಾವು ಈ ಗ್ರಹದೆಶೆಯ ಚಕ್ರದಲ್ಲಿ ಹನ್ನೆರಡು ವರ್ಷಗಳ ವರೆಗೆ ಸಿಲುಕಿ ಪರಿಪರಿಯಿಂದ ಬಳಲಬೇಕಾಗಿತ್ತು.

“ಒಳ್ಳೇದು, ಮುಂದೆ ಏನಾಯಿತು?” ಎಂದು ನರ್ಸ ಮೇರಿಯು ಕೇಳಿದಳು.

ಈ ಮಾತುಗಳು ನಡೆದಾಗ ಅವರೆಲ್ಲರೂ ಒಂದು ಕೋಣೆಯೊಳಗೆ ಕುಳಿತಿದ್ದರು ಸದಾಶಿವನು ನೆರೆಮನೆಯೊಳಗಿಂದ ನಾಲ್ಕು ಖುರ್ಚಿಗಳನ್ನು ತಂದಿಟ್ಟಿದ್ದನು. ಅವುಗಳ ಮೇಲೆ ಗುಡ್ ಉಯಿಲ್ ಸಾಹೇಬರೂ, ಅವರ ಮಡಮ್‌ನೂ, ಡಾಕ್ಟರರೂ, ನರ್ಸಳೂ ಕುಳಿತಿದ್ದರು ಗೋವಿಂದರಾಯರು ತಮ್ಮ ಹೆಂಡತಿಯ ಹೊರಸಿನ ಮೇಲೆ ಕುಳಿತು ತಮ್ಮ ಕರ್ಮಕಥೆಯನ್ನು ಹೇಳಲಾರಂಭಿಸಿದ್ದರು ಮಾಸ್ತರರೂ, ಶ್ರೀಪತರಾಯರೂ, ಸದಾಶಿವನೂ ಅಲ್ಲಿಯೇ ಚಾಪೆಯ ಮೇಲೆ ಕುಳಿತುಕೊಂಡಿದ್ದರು ಸಾವಿತ್ರಿಯು ಗೋವಿಂದರಾಯರ ಬಳಿಯಲ್ಲಿ ಕುಳಿತಿದ್ದಳು. ನರ್ಸ ಮೇರಿಯು ಪುಟ್ಟ ಯಶವಂತನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಕುಳಿತಿದ್ದಳು ಕೂಸಿನ ನುಣುಪಾದ ಗುಲಾಬಿ ವರ್ಣದ ಗಲ್ಲಗಳ ಮೇಲೆ ಕೈಯಾಡಿಸುತ್ತ ಅವಳು ಗೋವಿಂದರಾಯರಿಗೆ ಮೇಲಿನ ಪ್ರಶ್ನೆಯನ್ನು ಕೇಳಿದೊಡನೆ, ಅವರು ತಮ್ಮ ಕರ್ಮಕಥೆಯನ್ನು ಮುಂದೆ ಸಾಗಿಸಿದರು ಅವರು ಅಂದದ್ದೇನೆಂದರೆ:—“ಆ ದಿವಸ ಸಂಜೆಯ ಮುಂಚೆ ನಾನು ಮನೆಬಿಟ್ಟು ಹೊರಬಿದ್ದೆನು ಆಗ ನಾನು ಓಣಿಯ ಗುಂಟ ಒಬ್ಬ ಭ್ರಮಿಷ್ಟನಂತೆ ನಡೆದಿದ್ದೆನು. ನಾನು ಹೋಗುವ ದಾರಿಯಲ್ಲಿ ಠಾಕುರದ್ವಾರದೊಳಗಿನ ದತ್ತಾತ್ರಯನ ಗುಡಿಯ ಹೊರಮಗ್ಗಲಿನ ಬಯಲಿನಲ್ಲಿ ಒಳ್ಳೇ ಗದ್ದಲವು ನೆರೆದಿತ್ತು. ನಾನು ಸ್ವಾಭಾವಿಕವಾಗಿ ಆ ಗದ್ದಲದ ಕಡೆಗೆ ಹೊರಳಿದೆನು. ಅಲ್ಲಿ ಸಂಸಾರತ್ಯಾಗಿಯಾದ ಒಬ್ಬ ಸ್ವಾಮಿಯು ಜನರಿಗೆ ಉಪದೇಶ ಮಾಡುತ್ತ ನಿಂತಿದ್ದನು ನಾನು ಕಡೆತನಕ ಅಲ್ಲಿಯೇ ನಿಂತು ಅವರ ಸರ್ವ ಭಾಷಣವನ್ನು ಕೇಳಿಕೊಂಡೆನು. ಆ ಸ್ವಾಮಿಗಳ

ಅಂಗಕಾಂತಿಯು ಅತಿ ತೇಜಃಪುಂಜವಾಗಿತ್ತು. ಅವರ ಭಾಷಣವು ನನ್ನ ಮನಸ್ಸಿನ ಮೇಲೆ ಚನ್ನಾಗಿ ಪರಿಣಮಿಸಿತು ಮುಂದೆ ಎಲ್ಲರೂ ಹೊರಟು ಹೋದ ಮೇಲೆ ಸ್ವಾಮಿಗಳ ಬಳಿಯಲ್ಲಿ ಮೂರು-ನಾಲ್ಕು ಜನರೇ ಉಳಿದರು. ಆಗ ನಾನು ಮುಂದೆ ಹೋಗಿ ಸ್ವಾಮಿಗಳ ಪಾದಗಳ ಮೇಲೆ ಬಿದ್ದು, "ಮಹಾರಾಜರೇ, ನಾನು ಸಂಸಾರಕ್ಕೆ ಬೇಸತ್ತು ಹೋಗಿರುವೆನು ನನ್ನನ್ನು ಉದ್ಧರಿಸಿರಿ.'' ಎಂದು ಅಂಗಲಾಚಿ ಬೇಡಿಕೊಂಡೆನು. ನನ್ನ ಮಾತನ್ನು ಕೇಳಿ ಸ್ವಾಮಿಗಳು ಗಂಭೀರ ಸ್ವರದಿಂದ:-"ಅಪ್ಪಾ, ಈ ಕ್ಷಣಭಂಗುರವಾದ ಸಂಸಾರದಿಂದ ಯಾರಿಗೆ ಸುಖವು ಸಿಕ್ಕಿರುವದು?'' ಎಂದು ನುಡಿದು ನನಗೆ ಚನ್ನಾಗಿ ಉಪದೇಶ ಮಾಡಿದರು. ಅವರು ಆಗ ಹೇಳಿದ ಪ್ರತಿಯೊಂದು ಶಬ್ದವೂ ನನ್ನ ಹೃತ್ಪಟಲದ ಮೇಲೆ ಚನ್ನಾಗಿ ಬಿಂಬಿಸಿ ಹೋಗಿದೆ.''

ಅದನ್ನೇ ನಮಗೆ ಹೇಳಿರಿ. ಆ ಸ್ವಾಮಿಗಳು ಹೇಳಿದ ಉಪದೇಶವನ್ನು ಕೇಳಬೇಕೆಂದು ನಮಗೆ ಪ್ರಬಲ ಇಚ್ಛೆ ಇರುವದು, ಎಂದು ಮಡಮ್‌ನು ಅಂದಳು.

"ಮಡಮ್ ಸಾಹೇಬರೇ, ಅದು ನಿಮಗೆ ತಿಳಿಯಲಿಕ್ಕಿಲ್ಲ. ಯಾಕೆಂದರೆ ಆ ಉಪದೇಶವು ನಮ್ಮ ಪರಮಪೂಜ್ಯರಾದ ಸಾಧುಶ್ರೇಷ್ಠ ರಾಮದಾಸ ಸ್ವಾಮಿಗಳ ದಾಸಬೋಧವೆಂಬ ಉದ್ಗ್ರಂಥದೊಳಗಿನದಿರುವದು. ನಿಮಗೆ ಕೇಳೇ ತೀರಬೇಕೆಂಬ ಇಚ್ಛೆ ಇದ್ದರೆ ನಾನು ಅದರ ಸಾರಾಂಶ ಹೇಳುವೆನು.''

ಇದಕ್ಕೆ ಗುಡ್‌ಉಯಿಲ್ ಸಾಹೇಬರು:-ಹೆಳ್ಳಿದು ಹಾಗೆಯೇ ಆಗಲಿ, ಎಂದು ಅಂದರು.

ನನಗೆ ಸ್ವಾಮಿಗಳು ಹೇಳಿದ್ದೇನಂದರೆ:—"ಅಪ್ಪಾ, ಈ ಸಂಸಾರವೆಂದರೆ, ಮಾಯಾಪಾಶವಿರುತ್ತದೆ ಜಿಗಟಾದ ಬೆಲ್ಲದ

ಂಶೆಯಿಂದ ಅದರ ಮೇಲೆ ಬಿದ್ದು ಹಿದ್ದಾಡುವ ನೊಣದಂತೆ, ಮನುಷ್ಯ ನಾದರೂ ಈ ಸಂಸಾರದ ಬಲೆಯಲ್ಲಿ ಸಿಕ್ಕು ಹಿದ್ದಾಡುತ್ತಿರುವನು. ಈ ಸಂಸಾರದ ಉಗಮವು ದುಃಖದಿಂದಲೇ ಉಂಟಾಗಿ, ಮೃತ್ಯು ವೇದನೆಯಲ್ಲಿಯೇ ಅದರ ಅಂತವಾಗುವದು; ಮತ್ತು ಜನನ-ಮರಣ ಗಳೆಂಬ ಸ್ಥಿತಿಗಳ ನಡುವಿನ ಅವಕಾಶದಲ್ಲಿ, ಶಾರೀರಿಕ ಕ್ಲೇಶ, ಉದ್ವೇಗ, ಚಿಂತೆ ಮೊದಲಾದವುಗಳೂ ಬಂದೊದಗುವವು. ಸಂಸಾರ ದೊಳು ನಿಜವಾದ ಸುಖವು ಲವಲೇಶವಾದರೂ ಇಲ್ಲ. ಸಂಸಾರ ಮಾಡುವದರಲ್ಲಿ ಈ ನರದೇಹದ ಸಾಫಲ್ಯವಿಲ್ಲವೆಂಬ ತಿಳುವಳಿಕೆ ಉಂಟಾಗುವದೇ ಪರಮಾರ್ಥಕ್ಕೆ ಮುಖ್ಯ ಸಾಧನವು. ಈ ಮನುಷ್ಯ ದೇಹದ ಇಷ್ಟ ಹೇತುವನ್ನು ಸಫಲ ಮಾಡಿಕೊಳ್ಳುವ ಪ್ರಯತ್ನವನ್ನು ಮಾಡದಿದ್ದರೆ, ಇಂಥ ಉತ್ತಮವಾದ ಜನ್ಮದಲ್ಲಿ ಹುಟ್ಟಿದ್ದನ್ನು ವ್ಯರ್ಥ ಮಾಡಿಕೊಂಡಂತೆಯೇ ಸರಿ. ಆದ್ದರಿಂದ ನಾವೆ ಲ್ಲರೂ ಈ ಸಂಸಾರದ ಮಾಯಾಪಾಶದ ಕಟ್ಟುಗಳನ್ನು ಶ್ರೀ ತುಕಾ ರಾಮ ಮೊದಲಾದ ಸಾಧುಗಳಂತೆ, ಚಟಚಟನೆ ಹರಿದು ಹಾಕಲಿಕ್ಕೆ ಬೇಕು. ನಿನಗೆ ಈಗ ಹಿಂದೆ ಮಾಡಿದ ಎಲ್ಲ ದೋಷಗಳು ನೆನಪಾಗಿ ಅವುಗಳ ವಿಷಯಕ್ಕೆ ಪೂರ್ಣ ಪಶ್ಚಾತ್ತಾಪವೆನಿಸಿದ್ದು ನಿನ್ನ ದೊಡ್ಡ ಭಾಗ್ಯವೇ ಎಂದು ತಿಳಿ. ಈಗ ನಿನಗೆ ಪರಮಾರ್ಥ ಸಾಧನೆಯ ವಿಷಯವಾಗಿ ಚಡಪಡಿಕೆಯು ಹತ್ತಿರುವದು; ಮತ್ತು ನಿನ್ನ ಈ ಚಡಪಡಿಕೆಯು ಪೂರ್ಣ ಶಾಂತವಾಗಬೇಕೆಂದು ನಿನ್ನ ಇಚ್ಛೆ ಇದ್ದರೆ ಒಬ್ಬ ಸದ್ಗುರುಗಳನ್ನು ಶೋಧಿಸಿ, ಆಶ್ರಯಿಸು,'' ಇಷ್ಟು ಮಾತಾಡಿ ಆ ಸ್ವಾಮಿಗಳು ಅಲ್ಲಿಂದೆದ್ದು ಹೊರಟು ಹೋದರು ನಾನು ಅಲ್ಲಿ ಯೇ ವಿಚಾರ ಮಾಡುತ್ತ ಕುಳಿತೆನು. ಆಗ ಮುಚ್ಚಂಜೆಯ ವೇಳೆ ಯಾಗಿತ್ತು. ಸ್ತ್ರೀ-ಪುರುಷರು ದೇವರ ದರ್ಶನಕ್ಕೆಂದು ಬರಹೋ ಗುವ ಗಡಿಬಿಡಿಯು ನಡೆದಿತ್ತು; ಆದರೆ ನನಗೆ ಮಾತ್ರ ಯಾವ

ಸಂಗತಿಯು ವಿಷಯುಕ್ಕೂ ಎಚ್ಚರವಿದ್ದಿಲ್ಲ. ಆಗ ನಾನು ಯಾವ ಮಾತಿನ ವಿಷಯಕ್ಕೆ ವಿಚಾರ ಮಾಡುತ್ತಿದ್ದೆನೆಂಬದೂ ನನಗೆ ತಿಳಿಯಲಿಲ್ಲ. ಸ್ವಲ್ಪದರಲ್ಲಿ ಹೇಳುವದೆಂದರೆ, ನಾನು ನನ್ನನ್ನೇ ಮರೆತು ಬಿಟ್ಟಿದ್ದೆನು. ಮನೆಯಲ್ಲಿ ಹೆಂಡತಿಯೂ, ಮಕ್ಕಳೂ ತಿನ್ನಲಿಕ್ಕೆ ಅನ್ನವಿಲ್ಲದೆ ಬಳಲುತ್ತಿರುವರೆಂಬ ಸಂಗತಿಯೂ ಮರೆತು ಹೋಯಿತು. ಮುಂದೆ ೧೦-೧೧ ಹೊಡೆಯುವ ಸಮಯದಲ್ಲಿ ಆ ಸ್ವಾಮಿಗಳು ಮತ್ತೆ ನನ್ನ ಬಳಿಗೆ ಬಂದರು; ಮತ್ತು ನಾನು ಶೂನ್ಯ ಮನಸ್ಕನಾಗಿ ಹುಚ್ಚನಂತೆ ಕುಳಿತದ್ದನ್ನು ಕಂಡು ಅವರು:—"ನೀನು ಹೀಗೆ ಕುಳಿತಿರಬಹುದೆಂದು ನನಗೆ ಮೊದಲೇ ಅನಿಸಿತ್ತು! ಹೂ. ಏಳು; ಮತ್ತು ನನ್ನ ಸಂಗಡ ನಡೆ," ಎಂದು ಅಂದರು. ನಾನು ಕೂಡಲೆ ಎದ್ದು ಅವರ ಬೆನ್ನು ಹತ್ತಿದೆನು. ಮಹಾಲಕ್ಷ್ಮಿಯ ಗುಡಿಗೆ ಹೋಗಿ ಮುಟ್ಟುವ ವರೆಗೆ ಶ್ರೀಗಳವರು ನನ್ನ ಸಂಗಡ ಒಂದು ಶಬ್ದವನ್ನು ಕೂಡಾ ಮಾತಾಡಲಿಲ್ಲ ಅಲ್ಲಿಗೆ ಹೋದ ಮೇಲೆ ಆ ರಾತ್ರಿಯಲ್ಲಿಯೇ ನಾವಿಬ್ಬರೂ ಸಮುದ್ರ ಸ್ನಾನವನ್ನು ಮಾಡಿದೆವು. ಆ ಮೇಲೆ ಗುಡಿಯೊಳಗೆ ಹೋದೆವು. ಅಲ್ಲಿ ಸ್ವಾಮಿಗಳು ತಮ್ಮ ಜೋಳಿಗೆಯೊಳಗಿನ ಎರಡು ಹಣ್ಣುಗಳನ್ನು ತಿನ್ನಲಿಕ್ಕೆ ಕೊಟ್ಟರು. ಆ ಮೇಲೆ ಅವರು:-"ಇನ್ನು ಇಡೀ ರಾತ್ರಿಯು ನಿನ್ನದೇ ಇರುವದು. ಸರಿಯಾಗಿ ವಿಚಾರ ಮಾಡು; ಮತ್ತು ಸಂಸಾರಬಂಧನದಿಂದ ಬಿಡುಗಡೆ ಹೊಂದುವಿಯೋ-ಇಲ್ಲವೋ ಎಂಬದರ ಬಗ್ಗೆ ಚನ್ನಾಗಿ ಗುಣಿಸಿತು ಕೋ" ಎಂದು ಹೇಳಿ, ಅಲ್ಲಿಯೇ ಸ್ವಲ್ಪ ದೂರ ತಮ್ಮ ವ್ಯಾಘ್ರ ಚರ್ಮದ ಮೇಲೆ ಕುಳಿತು ಧ್ಯಾನಸ್ಥರಾದರು.

ಆ ರಾತ್ರಿಯನ್ನೆಲ್ಲ ನಾನು ವಿಚಾರ ಮಾಡುವದರಲ್ಲಿಯೇ ಕಳೆದೆನು; ಆದರೆ ನಾನು ಯಾತರ ಬಗ್ಗೆ ವಿಚಾರ ಮಾಡಿದೆನೆಂಬದೇ ನನಗೆ ತಿಳಿಯಲಿಲ್ಲ. ಮರುದಿವಸ ನಸುಕಿನಲ್ಲಿಯೇ ಸ್ವಾಮಿಗಳು

ನನ್ನನ್ನು ತಮ್ಮ ಹತ್ತರ ಕರೆದು, "ನಿನ್ನ ನಿರ್ಣಯವು ಏನಾಯಿತು?" ಎಂದು ಕೇಳಿದರು. ಕೂಡಲೆ ನಾನು "ನನ್ನ ಸಂಸಾರದ ವ್ಯಾಮೋಹವು ದೂರಾಯಿತು" ಎಂದು ಹೇಳಿದೆನು. ಅದನ್ನು ಕೇಳಿ ಸ್ವಾಮಿಗಳು:-"ಈ ನಿನ್ನ ನಿಶ್ಚಯುವನ್ನು ನೋಡಿ ನನಗೆ ಅತಿ ಹರುಷವಾಯಿತು. ಇವತ್ತಿನಿಂದ ನಿನ್ನ ನಿಜವಾದ ಜೀವಿತ ಯಾತ್ರೆಗೆ ಪ್ರಾರಂಭವಾದಂತಾಯಿತು; ಯಾಕೆಂದರೆ ಸುದೃಢತೆಯೇ ಜೀವಿತವು; ಮತ್ತು ಹೇಡಿತನವೇ ಮೃತ್ಯುವಾಗಿರುವದು. ಅದರಂತೆಯೇ ಮನೋಬಲವೇ ನಿಜವಾದ ಸುಖವು; ಮತ್ತು ಶೈಲಾಗದ ಹೇಡಿತನವೇ ದುಃಖವೆನಿಸುವದು!"

"ಆ ಮೇಲೆ ಅವರು ತಮ್ಮ ಕ್ಯಾವೀ ನಿಲುವಂಗಿಯನ್ನು ತೊಡಿಸಿದರು ನನ್ನ ವೇಷಾಂತರವಾದ ಮೇಲೆ, ಬೆಳಗಾದ ಕೂಡಲೆ ನಾವು ಅಲ್ಲಿಂದ ಹೊರಟು ಬೋರೀಬಂದರ ಸ್ಟೇಶನ್ನಕ್ಕೆ ಹೋ-ದೆವು. ಹೋಗುವಾಗ ದಾರಿಯಲ್ಲಿ ನಾನು ಹಿಂದೇಸವನೆ ವಿಚಾರ ಮಾಡುತ್ತ ನಡೆದಿದ್ದೆನು. ನಾನು ಸ್ವಾಮಿಗಳ ಸಂಗಡ ಗಾಡಿಯೊಳಗೆ ಕುಳಿತೆನು; ಆದರೆ ಎಲ್ಲಿಗೆ ಹೋಗುವದು? ಮತ್ತು ಟಿಕೀಟುಗಳನ್ನು ಯಾರು ತೆಗೆದರು? ಮತ್ತು ರೊಕ್ಕಾ ಯಾರು ಖರ್ಚು ಮಾಡಿದರು? ಎಂಬವುಗಳ ವಿಷಯುಕ್ಕೆ ನನಗೆ ಏನೂ ತಿಳಿಯುಲಿಲ್ಲ. ಈ ಮೇರೆಗೆ ನಮ್ಮ ಪ್ರವಾಸಕ್ಕೆ ಆರಂಭವಾಯಿತು ಹಗಲೆಲ್ಲ ಪ್ರವಾಸ ಮಾಡಿದ ಮೇಲೆ ಸಂಜೆಗೆ ನಾವು ಹಿಂದು ದೊಡ್ಡ ಸ್ಟೇಶನ್ನಕ್ಕೆ ಹೋಗಿ ಮುಟ್ಟಿ ಅಲ್ಲಿ ಗಾಡಿಯಿಂದ ಇಳಿದೆವು; ಮತ್ತು ಅಲ್ಲಿ ಹಿಂದು ಧರ್ಮಶಾಲೆಯಲ್ಲಿ ವಸತೀ ಮಾಡಿದೆವು. ಸ್ವಾಮಿಗಳು ಸ್ನಾನ ಮಾಡಿ ತಮ್ಮ ನಿತ್ಯ ನಿಯಮಿತ ಕರ್ಮಗಳನ್ನು ತೀರಿಸಿಕೊಂಡರು. ಆ ಮೇಲೆ ನಾವಿಬ್ಬರೂ ಫಲಾಹಾರವನ್ನು ತಕ್ಕೊಂಡೆವು. ಈ ನಮ್ಮ ಕ್ರಮವು ಮುಂದೆ ಎಷ್ಟೋ

ದಿವಸಗಳ ವರೆಗೆ ಹೀಗೆಯೇ ನಡೆಯಿತು. ನಾವು ಅನೇಕ ತೀರ್ಥ-ಯಾತ್ರೆಗಳನ್ನು ಮಾಡಿದೆವು ಅಲ್ಲಿ ಬಗೆಬಗೆಯ ಚಮತ್ಕಾರಗಳನ್ನು ನೋಡಿದೆವು. ಅನೇಕ ಸಾಧು-ಸಂತರ ದರ್ಶನವನ್ನು ತಕ್ಕೊಂಡೆವು ನಾಲ್ವತ್ತು ದಿವಸಗಳ ವರೆಗೆ ಸ್ವಾಮಿಗಳು ನನ್ನ ಸಂಗಡ ವಿಶೇಷ ಮಾತಾಡಲಿಲ್ಲ ಈ ಅವಧಿಯಲ್ಲಿ ನಾನು ಎಷ್ಟೋ ರಾತ್ರಿಗಳನ್ನು ಅತಿ ಚಿಂತೆಯಲ್ಲಿಯೇ ಕಳೆದೆನು. ನಾನು ಕರ್ತವ್ಯ ವಿಮುಖನಾಗಿ ಹೆಂಡಿರು-ಮಕ್ಕಳನ್ನು ಅನಾಥರನ್ನಾಗಿ ಮಾಡಿ ಬಂದೆನೆಂದು ನನ್ನ ಮನಸ್ಸಿನಲ್ಲಿ ಒಂದೇಸವನೆ ಕಟಿಯುತ್ತಿತ್ತು; ಆದರೆ ಬರಬರುತ್ತ ಈ ನನ್ನ ವಿಚಾರಗಳು ಲೋಪವಾಗಿ ನಾನು ನಿಶ್ಚಿಂತನಾದೆನು. ನನ್ನ ಮನೋಸ್ಥಿತಿಯು ಹೀಗಾದದ್ದನ್ನು ನೋಡಿ, ಒಂದು ದಿವಸ ಸೂರ್ಯಾಸ್ತ ಸಮಯಕ್ಕೆ ನಾವು ಪವಿತ್ರವಾದ ಗಂಗಾತೀರದಲ್ಲಿ ಕುಳಿತಿರಲಾಗಿ, ಸ್ವಾಮಿಗಳು ನನಗೆ ಮತ್ತೆ ಸದ್ಬೋಧಾಮೃತ ಪ್ರಾಶನವನ್ನು ಮಾಡಿಸಹತ್ತಿದರು; ಇದರಿಂದ ನನ್ನ ಜೀವನಕ್ರಮವು ನಿಜವಾಗಿಯೇ ಬದಲಾಯಿತು ಸ್ವಾಮಿಗಳ ಸನ್ನಿಧಿಯಲ್ಲಿ ನನಗೆ ಅವರು ಮಾಡಿದ ಉಪದೇಶದ ಅನುಭವವುಂಟಾಗಿ ಅದರ ಮಹತ್ವವು ತಿಳಿದು ಅದರ ಪ್ರತ್ಯಯವು ಹೆಜ್ಜೆಹೆಜ್ಜೆಗೆ ಬರಲಾರಂಭಿಸಿತು. ನಾವು ದಿನಾಲು ಯಾವದಾದರೊಂದು ನದಿಯಲ್ಲಿ ಇಲ್ಲವೆ ತಟಾಕದಲ್ಲಿ ಸ್ನಾನವನ್ನು ತೀರಿಸಿಕೊಂಡು ಮನಸೋಕ್ತವಾಗಿ ವನ್ಯಫಲಗಳನ್ನು ಭಕ್ಷಿಸಿ, ಒಂದು ವಟವೃಕ್ಷದ ನೆರಳಿನಲ್ಲಿ ಇಲ್ಲವೆ ದೇವಾಲಯದಲ್ಲಿ ಕುಳಿತು ಪರಮಾರ್ಥ ಚಿಂತನೆಯಲ್ಲಿಯೇ ವೇಳೆಗಳೆಯುತ್ತಿದ್ದೆವು. ಸ್ವಾಮಿಗಳ ಉಪದೇಶವು ನಡೆದೇ ಇತ್ತು. ಹೀಗೆ ಸ್ವಾಮಿಗಳ ಹತ್ತರವಿದ್ದು, ಫಲಾಪೇಕ್ಷೆಯಿಲ್ಲದೆ ಕೇವಲ ಆತ್ಮಶುದ್ಧಿಗಾಗಿಯೇ ಶರೀರ, ಬುದ್ಧಿ, ಇಂದ್ರಿಯಗಳಿಂದ ಯೋಗಸಾಧನೆಯನ್ನು ಹ್ಯಾಗೆ ಮಾಡಿಕೊಳ್ಳುವರು?" ಮತ್ತು

ಕರ್ಮಫಲದ ಅಪೇಕ್ಷೆಯಿಲ್ಲದ್ದರಿಂದ ಅವರಿಗೆ ಚಿರಶಾಶ್ವತವಾದ ಸುಖವು ಹ್ಯಾಗೆ ಪ್ರಾಪ್ತಿಯಾಗುವದೆಂಬದು ನನಗೆ ಕಣ್ಣಾರೆ ನೋಡಲಿಕ್ಕೆ ಸಿಕ್ಕಿತು. ಹಿಟ್ಟನ ಮೇಲೆ, "ಕರ್ಮಫಲದ ಇಚ್ಛೆ ಇಲ್ಲದೆ ಯಾವನು ಕಾರ್ಯ ಮಾಡುವನೋ ಅವನೇ ನಿಜವಾದ ಯೋಗಿಯು; ಮತ್ತು ಸಂನ್ಯಾಸಿಯೆಂದೆನಿಸಿಕೊಳ್ಳುವನು." ಎಂಬ ಭಗವಂತನ ವಚನವು ನನಗೆ ಸ್ವಾಮಿಗಳ ಆಚರಣೆಯಿಂದ ನಿದರ್ಶನಕ್ಕೆ ಬಂತು.

ಈ ಮೇರೆಗೆ ಎಷ್ಟೋ ದಿವಸಗಳು, ವಾರಗಳು, ತಿಂಗಳುಗಳು ಮತ್ತು ವರ್ಷಗಳು ಕಳೆದು ಹೋದವು ಕಡೆಗೆ ಒಂದು ದಿವಸ ನಾವು ನಿತ್ಯ ನಿಯಮದ ಪ್ರಕಾರ ನಮ್ಮ ಕರ್ಮಾನುಷ್ಠಾನಗಳನ್ನು ಮುಗಿಸಿದ ಮೇಲೆ, ಸ್ವಾಮಿಗಳು ನನಗೆ, "ಹೂ, ಏಳು; ಇನ್ನು ನೀನು ನಿನ್ನ ಮೊದಲಿನ ಸ್ಥಳಕ್ಕೆ ತಿರುಗಿ ಹೊರಡುವ ಸಿದ್ಧತೆ ಮಾಡು. ನಿನ್ನ ಬೆನ್ನು ಹತ್ತಿದ ಹನ್ನೆರಡು ವರ್ಷಗಳ ಗ್ರಹಗಳ ಕಾಟವು ಇನ್ನು ತೀರುತ್ತ ಬಂದಿರುವದು. ನೀನು ನಿನ್ನ ಮನೆಗೆ ತಿರುಗಿ ಹೋಗು. ನಿನ್ನ ಕುಟುಂಬದವರಿಗೆ ಈಗ ನಿನ್ನ ಅವಶ್ಯಕತೆಯು ಇರುವದು. "ಧರ್ಮೋ ಜಗತ್ಕಲ್ಯಾಣಧಾರಕಃ" ಎಂಬ ತತ್ವವನ್ನು ಲಕ್ಷದಲ್ಲಿಟ್ಟುಕೊಂಡು, ಪರೋಪಕಾರವೇ ಪುಣ್ಯವೆಂದೂ, ಲೋಕ ಕಲ್ಯಾಣವೇ ಮುಖ್ಯ ಧರ್ಮವೆಂದೂ ಮತ್ತು ಮೋಕ್ಷಕ್ಕೆ ಮುಖ್ಯ ಸಾಧನವೆಂದೂ ಚನ್ನಾಗಿ ಅರಿತು ಕಾರ್ಯ ಮಾಡು." ಹೀಗೆಂದು ಅವರು ನನ್ನ ಕರ್ತವ್ಯದ ವಿಷಯುವಾಗಿ ಚನ್ನಾಗಿ ತಿಳಿಸಿ ಹೇಳಿದರು ಇಷ್ಟೆಲ್ಲ ಹೇಳಿದರೂ ನನಗೆ ನನ್ನ ಗುರುಗಳ ಚರಣ ಕಮಲಗಳಿಂದ ದೂರಾಗುವದೆಂದರೆ ಜೀವದ ಸುತ್ತೇ ಬಂತು. ಕಡೆಗೆ ಅವರು ನನಗೆ ಸ್ವಧರ್ಮದ ವ್ಯಾಖ್ಯೆಯನ್ನು ಒಡೆದು ತಿಳಿಸಿ ಹೇಳಿದ ಮೇಲೆ ನಾನು ತಿರುಗಿ ಮನೆಗೆ ಹೋಗುವದಕ್ಕೆ ಸಿದ್ಧನಾದೆನು."

ಇಷ್ಟೊತ್ತಿನ ವರೆಗೆ ಗೋವಿಂದರಾಯನು ನಡೆಸಿದ ಭಾಷಣವನ್ನು ಎಲ್ಲರೂ ಹಿಮ್ಮನಸ್ಸಿನಿಂದ ಕೇಳುತ್ತಿದ್ದರು. ಗೋವಿಂದರಾಯರು ತಮ್ಮ ಭಾಷಣದಲ್ಲಿಯ ಕಠಿಣವಾದ ಭಾಗಗಳನ್ನೆಲ್ಲ ಸುಲಭ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಸವಿಸ್ತರ ರೀತಿಯಿಂದ ತಿಳಿಸಿ ಹೇಳುತ್ತಿದ್ದರು. ಕಡೆಗೆ ಗೋವಿಂದರಾಯರು ತಮ್ಮ ಭಾಷಣವನ್ನು ಮುಗಿಸಿದ ನಂತರ ಮಹದೇವನು:-ಗೋವಿಂದರಾಯರೇ, ನಿಮಗೆ ನಿಮ್ಮ ಗುರುಗಳು ಸ್ವಧರ್ಮವೆಂಬದರ ಶಬ್ದಾರ್ಥವನ್ನು ಹೇಗೆ ತಿಳಿಸಿದರು? ಸ್ವಧರ್ಮವೆಂದರೆ 'ಡ್ಯೂಟಿ' (ಕರ್ತವ್ಯ) ಎಂದೇ ಹೇಳಿದರಲ್ಲವೆ?

ಹೌದು. ಧರ್ಮಕ್ಕೇ ಸ್ವಾಭಾವಿಕ-ನಿಯತ ಕರ್ಮವೆಂದೆನ್ನುತ್ತಾರೆ. ನೈಸರ್ಗಿಕವಾಗಿ ಪ್ರಾಪ್ತವಾಗುವದು -ಅಂದರೆ ನಮ್ಮ ಜನ್ಮದ ಸಂಗಡ ಬಂದ ಕರ್ಮವೇ ನಮ್ಮ ಧರ್ಮವೆನಿಸುವದು. ಸ್ವಧರ್ಮ-ಕರ್ಮದ ನಿಷ್ಕಾಮವಾದ ಆಚರಣೆಯನ್ನೇ ಶ್ರೀ ಕೃಷ್ಣ ಪರಮಾತ್ಮನು (ಕರ್ಮಯೋಗದ ಅಧ್ಯಾಯದಲ್ಲಿ) ತನ್ನ ಪ್ರಿಯ ಶಿಷ್ಯನಾದ ಅರ್ಜುನನಿಗೆ ತಿಳಿಸಿ ಹೇಳಲು, ಅದು ಅವನ ಮನಸ್ಸಿಗೆ ಪೂರಾ ಬಂದು ಅವನು ತತ್ಕಾಲಕ್ಕೇ ಅದರಂತೆ ಆಚರಿಸತೊಡಗಿದನು ಈ ಮೇರೆಗೆ ನನ್ನ ಗುರುಗಳು ನನ್ನ ಕರ್ತವ್ಯದ ಜ್ಞಾನ ಮಾಡಿಕೊಟ್ಟು, ನನಗೆ ಹೋಗಲಪ್ಪಣೆ ಮಾಡಿ ಆಶೀರ್ವದಿಸಿದರು. ಆ ಮೇಲೆ ನನಗೆ ಕೆಲವು ವನೌಷಧಿಗಳನ್ನು ಕೊಟ್ಟು. ಅವುಗಳ ಗುಣದೋಷಗಳನ್ನು ಚನ್ನಾಗಿ ತಿಳಿಸಿ ಹೇಳಿದರು. ಆ ಮೇಲೆ ನಾನು ಅಲ್ಲಿಂದ ಹೊರಟು, ನಾಶಿಕ ಕ್ಷೇತ್ರಕ್ಕೆ ಬಂದೆನು. ಅಲ್ಲಿ ಹಿಂದು ಧರ್ಮಶಾಲೆಯಲ್ಲಿ ನನಗೆ ನೂರವರು ಬೈರಾಗಿಗಳು ಭೆಟ್ಟಿಯಾದರು. ಅವರು ನನಗೆ ಚಿಲಿಮೆಯನ್ನು ಸೇದಲಿಕ್ಕೆ ಬೇಕೆಂದು ಆಗ್ರಹ ಮಾಡಿದರು ಅವರಲ್ಲಿ ಹಿಬ್ಬನು ಚಿಲಿಮೆಯನ್ನು ತುಂಬಿ

ತಂಬಾಕುಹಾಕಿದ ಕಾಗದವನ್ನು ದೂರ ಬೀಸಾಡಿ ಬಿಟ್ಟನು. ಅದೇ ಈ ಕಾಗದವು" ಹೀಗೆಂದು ಗೋವಿಂದರಾಯರು ತಮ್ಮ ಜೋಳಿಗೆಯಲ್ಲಿ ಮಡಿಚಿ ಜತನದಿಂದಿಟ್ಟ ವರ್ತಮಾನ ಪತ್ರದ ಒಂದು ಹರಕ ಕಾಗದದ ಚೂರನ್ನು ಹೊರಗೆ ತೆಗೆದರು.

ಕೂಡಲೆ ಸದಾಶಿವನು, "ಇದು ನನ್ನ ವಿಷಯಕ್ಕೇ ಇರುವದು. ನಾನು ಶಾಲೆಯನ್ನು ಬಿಡುವ ಮುಂದೆ ನನ್ನ ಸಂಗಡಿಗರು ನನ್ನ ಸಲುವಾಗಿ ಮಾಡಿದ ಸಮಾರಂಭದ ಸಂಗತಿಯೇ ಈ ಇಂದು ಪ್ರಕಾಶದ ಅಂಕಿನಲ್ಲಿ ಪ್ರಸಿದ್ಧವಾಗಿರುವದು" ಎಂದು ಅಂದನು.

"ಮಗನೇ, ಈ ನಿನ್ನ ಹೆಸರು ಕಂಡಾಕ್ಷಣವೇ ನನಗೆ ನನ್ನ ಹಿಂದಿನ ಸಂಗತಿಗಳೆಲ್ಲ ನೆನಪಾದವು. ಈ ಸಂಗತಿಯನ್ನು ಓದಿದ ಕೂಡಲೆ ನಾನು ಬರುವ ಮುಂದೆ ನಮ್ಮ ಗುರುಗಳು 'ನಿನ್ನ ಕುಟುಂಬದವರಿಗೆ ಈಗ ನಿನ್ನ ಅತ್ಯವಶ್ಯಕತೆಯಿರುವದು' ಎಂದು ನನಗೆ ಹೇಳಿದ ಮಾತು ಸತ್ಯವಿರುವದೆಂದು ಮನವರಿಕೆಯುಂಟಾಯಿತು; ಮತ್ತು ನನಗಾದರೂ ಸ್ವಕರ್ತವ್ಯದ ಜಾಗೃತಿಯುಂಟಾದ್ದರಿಂದ, ದಾದರಕ್ಕೆ ಬಂದು ನಿಮ್ಮೆಲ್ಲರನ್ನು ಯಾವಾಗ ನೋಡೇನೋ ಎಂಬ ಲವಲವಿಕೆಯುಂಟಾಯಿತು"

## ೧೬ನೆಯ ಪ್ರಕರಣ.

# ಉಪಸಂಹಾರ.

ಗೋವಿಂದರಾಯರು ತಮ್ಮ ವೃತ್ತಾಂತವನ್ನು ಮುಗಿಸಿದ ಕೂಡಲೆ ಶ್ರೀಪತರಾಯರ ಕಡೆಗೆ ನೋಡಹತ್ತಲು, ಕೇಶವರಾವ ಮಾಸ್ತರರು ಮುಂದೆ ಬಂದು ಅವರ ಗುರುತನ್ನು ಮಾಡಿಕೊಟ್ಟರು.

ತಮಗೆ ಸುಶೀಲನಾದ ಮತ್ತು ಜಾಣನಾದ ಅಳಿಯನು ದೊರಕಿದನೆಂದು ನೆನೆದು ಗೋವಿಂದರಾಯರಿಗೆ ಆನಂದವಾಯಿತು. ತನ್ನ ಪತಿಯು ತಿರುಗಿ ಬಂದದ್ದನ್ನು ನೋಡಿ ಭಾಗೀರಥೀದೇವಿಯು ಅರ್ಧಕ್ಕಿಂತ ಹೆಚ್ಚು ಬೇನೆಯು ಕಡಿಮೆಯಾದಂತಾಗಿ ಅವಳ ಮನಸ್ಸಿಗೆ ಸಮಾಧಾನವೆನಿಸಿತು. ಗುಡವ್‌ಸಾಹೇಬರು ಅಂದಮೋರಿಗೆ ನಿಜವಾಗಿ ಆ ಮಹಾಸಾಧ್ವಿಯು ಹನ್ನೆರಡು ವರ್ಷದ ಕಡುತರವಾದ ತಪಸ್ಸಿನ ಫಲವು ಇವತ್ತಿನ ದಿವಸ ದೊರೆಯಿತೆನ್ನಲಿಕ್ಕೆ ಅಡ್ಡಿಯಿಲ್ಲ. ಆ ಚಿಕ್ಕ ಕುಟುಂಬದಲ್ಲಿ ಕಗ್ಗತ್ತಲೆಯ ಅಮಾವಾಸ್ಯೆಯು ಕಳೆದಂತಾಗಿ, ಎಲ್ಲಿ ನೋಡಿದಡಲ್ಲಿ ಪೌರ್ಣಿಮೆಯ ಚಂದ್ರನ ಉದಯವಾದಂತಾಗಿತ್ತು.

ಗುಡ್‌ಉಯಿಲ್‌ಸಾಹೇಬರು ಆಡಿದಂತೆ ಸದಾಶಿವನಿಗೆ ತಮ್ಮ ಕಚೇರಿಯಲ್ಲಿಯೇ ಕೆಲಸ ಕೊಟ್ಟರು. ಅಲ್ಲಿ ಅವನಿಗೆ ತಿಂಗಳಿಗೆ ಐವತ್ತು ರೂಪಾಯಿ ಸಂಬಳ ಸಿಗಹತ್ತಿತು. ಕೆಲವು ದಿವಸಗಳ ಮೇಲೆ ಅವರು ಶ್ರೀಪತರಾಯರನ್ನೂ ಕರೆಸಿ ತಮ್ಮ ಕಚೇರಿಯಲ್ಲಿಯೇ ಕೆಲಸಕ್ಕೆ ನೇಮಿಸಿಕೊಂಡರು. ಶ್ರೀಪತರಾಯರು ನಾವರ ಕಂಪನಿಯಲ್ಲಿದ್ದಾಗ ಇಪ್ಪತ್ತೈದು ರೂಪಾಯಿ ಸಂಬಳ ಸಿಗಬೇಕಾದರೆ ಸಾಕುಸಾಕಾಗುತ್ತಿತ್ತು; ಆದರೆ ಗುಡ್‌ಉಯಿಲ್‌ರವರ ಕಾರಖಾನೆಯಲ್ಲಿ ಬಂದ ಒಳಿಕ ಇವರ ಸ್ವಾಭಾವಿಕ ಗುಣವು ಹೊರಬಿದ್ದದರಿಂದ ಕಾರಖಾನೆಯ ಕೈಗಾರಿಕೆಯಲ್ಲಿ ತುಂಬಾ ಸುಧಾರಣೆಯಾಗಹತ್ತಿತು. ಕೆಲಸವೂ ವಿಶೇಷವಾಗಿ ಆಗಹತ್ತಿತು. ಶ್ರೀಪತರಾಯರ ಈ ಚುರುಕು ಬುದ್ಧಿಯನ್ನು ನೋಡಿ ಗುಡ್‌ಉಯಿಲ್‌ರು ತುಂಬಾ ಸಂತೋಷಬಟ್ಟು ಅವರಿಗೆ ಒಂದು ತಿಂಗಳೊಳಗಾಗಿಯೇ ನೂರು ರೂಪಾಯಿ ಸಂಬಳ ಮಾಡಿದರು. ಸದಾಶಿವನು ಪ್ರಾಮಾಣಿಕ ತನದಿಂದ ಕೆಲಸ ಮಾಡಿ ಗುಡ್‌ಉಯಿಲ್ಲರ ಪ್ರೀತಿಗೆ ಪಾತ್ರ

ನಾಗಿ ತಿಂಗಳಿಗೆ ಎಪ್ಪತ್ತೈದು ರೂಪಾಯಿ ಸಂಬಳ ಪಡೆದನು. ಬರ ಬರುತ್ತ ಶ್ರೀಪತರಾಯರೂ, ಸದಾಶಿವನೂ ಘನತೆಗೇರಿದರು. ಅವರ ಈ ಉತ್ಕರ್ಷವನ್ನು ಕಂಡು ಅವರ ಸ್ನೇಹಿತರು ಬೆರಗಾದರು. ವಿವಕ್ಷಿತ ಪರೀಕ್ಷೆಯಲ್ಲಿ ಪಾಸಾಗಿ, ಸರಕಾರೀ ಕಾರಕೂನಿಕೆಯಲ್ಲಿ ಸೇರಿ, ಕೊಟ್ಟಷ್ಟು ಪಗಾರ ತಕ್ಕೊಂಡು, ಕೊಟ್ಟಷ್ಟು ಕೆಲಸ ಮಾಡು ವದರಲ್ಲಿ ಏನೂ ಅರ್ಥವಿಲ್ಲೆಂದು ಅವರಿಗೆ ಅನಿಸಿತು. ಸ್ವತಂತ್ರ ಬುದ್ಧಿಯ ಮನುಷ್ಯನು ಸರಕಾರೀ ನೌಕರಿಯಲ್ಲಿ ಸೇರಿ, ಒಬ್ಬರ ಕೈಕೂಳು ತಿನ್ನುವದಕ್ಕಿಂತ, ಸ್ವತಂತ್ರ ಉದ್ಯೋಗದಲ್ಲಿ ಸೇರಿ ಆತ್ಮೋನ್ನತಿಯನ್ನು ಮಾಡಿಕೊಳ್ಳುವದು ಲೇಸೆಂದು ಅವರು ನಿರ್ಧರಿಸಿದರು ಎಷ್ಟೋ ಜನ ಕಲಾಕುಶಲರು ಗುಡ್‌ಉಯಿಲ್ಲರ ಆಶ್ರಯವನ್ನು ಪಡೆದು ತಮ್ಮ ಕಲ್ಯಾಣವನ್ನು ಮಾಡಿಕೊಂಡರು ಗುಡ್‌ವುಯಿಲ್ಲರು ಹಿಂದುಗಳ ಕೈವಾರಿಗಳಾಗಿದ್ದರು. ಹಿಂದುಸ್ಥಾನದ ಜನರು ಪ್ರಾಮಾಣಿಕರೂ, ಸರಳ ಮನಸ್ಸಿನವರೂ ಎಂಬದು ಅವರಿಗೆ ಪೂರಾ ಗೊತ್ತಿತ್ತು; ಆದರೆ ನಮ್ಮವರ ರಾಜ್ಯಭಾರದಿಂದ ಅವರಿಗೆ ಸಾಕಷ್ಟು ಉತ್ತೇಜನವಿಲ್ಲೆಂದು ಮರಮರನೆ ಮರಗುತ್ತಿದ್ದರು. ತಮ್ಮ ಕಾರಖಾನೆಯಲ್ಲಾದರೂ ಕೆಲ ಹಿಂದುಗಳಿಗೆ ಆಶ್ರಯ ಕೊಟ್ಟು, ಅವರನ್ನು ಮುಂದಕ್ಕೆ ತರಬೇಕೆಂದು ಪ್ರಯತ್ನಿಸುತ್ತಿದ್ದರು. ಚಲೋ ಮನಸ್ಸಿನ ಇಂಥ ಜನರು ಸಿಗುವದು ಅಪರೂಪವು ಇಂಥ ಉತ್ತಮ ಜನರು ಬೀಜಭೂತವಾಗಿ ಎಲ್ಲ ದೇಶಗಳಲ್ಲಿಯೂ, ಎಲ್ಲ ರಾಷ್ಟ್ರಗಳಲ್ಲಿಯೂ ಎಲ್ಲ ಜಾತಿಗಳಲ್ಲಿಯೂ ಇರುವರು.

ಗೋವಿಂದರಾಯರು ಡಾ. ಪಾಯುಸ್ ಇವರಿಗೆ ಆಯುರ್ವೈದ್ಯಕೀಯ ವಿಷಯವನ್ನು ಕಲಿಸಿದರು; ಆದರಿಂದ ಆ ಪರೋಪಕಾರೀ ಡಾಕ್ಟರರ ಪ್ರಖ್ಯಾತಿಯು ದಿಗಂತವಾಗಿ ಹಬ್ಬಿತು. ಪಾಶ್ಚಾತ್ಯ

ಔಷಧಿಗಳ ನೂರಾರು ಪಾಲು ಗುಣವು ವನಸ್ಪತಿ ಔಷಧಗಳಲ್ಲಿರುತ್ತ ದೆಂಬ ಅನುಭವವನ್ನು ಆ ಡಾಕ್ಟರರು ಕಂಡುಕೊಂಡರು. ನರ್ಸ ಮೇರಿಯು ಗೋವಿಂದರಾಯರ ಕುಟುಂಬದಲ್ಲಿಯು ಹಬ್ಬಳಂತೆ ತನ್ನ ವರ್ತನೆವನ್ನಿಟ್ಟಳು. ಆಕೆಯು ಭಾಗೀರಥೀದೇವಿಯು ಪಾತಿವ್ರತ್ಯ ಪ್ರಭಾವವನ್ನು ತಿಳಿದು ಹಿಂದುಗಳ ದಾಂಪತ್ಯ ಸೌಖ್ಯವನ್ನು ಕುರಿತು ಸ್ವತಂತ್ರ ಗ್ರಂಥವನ್ನು ಬರೆದಳು. ಆಕೆಯು ಆ ಗ್ರಂಥದಲ್ಲಿ ಹಿಂದು ಗಳ ದಾಂಪತ್ಯಭಾವವನ್ನು ಮೇಲಾದ ಶಬ್ದಗಳಿಂದ ವರ್ಣಿಸಿ, ಪಾಶ್ಚಾತ್ಯ ದಾಂಪತ್ಯ ಪದ್ಧತಿಯ ಕಾಡುಸ್ಥಿತಿಯನ್ನು ವಿಶೇಷವಾಗಿ ಹಳಿದಿರುವಳು.

ಸರಳ ಮನಸ್ಸಿನ ಪಾಶ್ಚಾತ್ಯರು ಸದಾಚರಣೆಯ ಹಿಂದುಗಳ ನ್ನು ಕಂಡರೆ ಹ್ಯಾಗೆ ಪ್ರೇಮ ಮಾಡುತ್ತಾರೆಂಬುದು ಗೋವಿಂದರಾ ಯನ ಕುಟುಂಬ, ಮಿಸೆಸ್ ಗುಡ್‌ಉಯಿಲ್. ಮಿಸ್ಟರ ಗುಡ್ ಉಯಿಲ್, ಡಾ ಪಾಯುಸ್, ನರ್ಸ ಮೇರಿ ಇವರ ಆಚರಣೆಯಿಂದ ಜಗತ್ತಿಗೆ ತಿಳಿದು ಬರಲಾರಂಭಿಸಿತು.

\+ \+ \+ \+ \+ \+

ಗೋವಿಂದರಾಯನ ಕುಟುಂಬವು ವೈಭವವನ್ನು ಹೊಂದಿತು. ಅವರು ಮುಂಬಯಿಯಲ್ಲಿ ಒಂದು ಸುಂದರವಾದ ಮಂದಿರವನ್ನು ಕೊಂಡುಕೊಂಡು ಅಲ್ಲಿ ಇರಲಾರಂಭಿಸಿದರು ಕೃಷ್ಣಾಬಾಯಿಯು ಪತಿಯೊಡನೆ ತವರುಮನೆಯಲ್ಲಿ ವಾಸಿಸಿ ಅಪಾರ ಸೌಖ್ಯಗಳನ್ನನು ಭವಿಸಲಾರಂಭಿಸಿದಳು. ಭಾಗೀರಥೀಬಾಯಿಯು ಪತಿಯ ಪರಿ ಶ್ರಮದಿಂದ ವ್ಯಾಧಿವಿನಿರ್ಮುಕ್ತಳಾಗಿ ಶ್ರೀಮಂತ ಕುಟುಂಬದ ಯಾಜಮಾನ್ಯವನ್ನು ಅನುಭವಿಸ ತೊಡಗಿದಳು. ಗೋವಿಂದರಾ ಯರು ಗುರುದತ್ತ ವನಸ್ಪತಿಗಳಿಂದ ಬಡಬಗ್ಗರ ಕಲ್ಯಾಣ ಮಾಡುತ್ತ ಗೃಹವ್ಯವಸ್ಥೆಯನ್ನು ನೋಡಿಕೊಂಡು ಈಶಚಿಂತನೆಯಲ್ಲಿ ಕಾಲ

ಕಳೆಯಲುಪಕ್ರಮಿಸಿದರು. ಸ್ವಲ್ಪ ದಿವಸಗಳ ಹಿಂದೆ ದುಃಖಮಯವಾದ ಅವರ ಸಂಸಾರವು ಈಗ ಸಂತತಿ, ಸಂಪತ್ತು, ಮಕ್ಕಳುಮರಿಗಳಿಂದ ತುಂಬಿ, ಸರ್ವತ್ರದಲ್ಲಿ ಆನಂದವನ್ನುಂಟು ಮಾಡಲಾರಂಭಿಸಿತು. ಇದು ಎಂಥ ಗ್ರಹಲೀಲೆಯೆಂದು ಜನರು ಮಾತನಾಡಲುಪಕ್ರಮಿಸಿದರು.

+ + + + + + +

ಪ್ರಿಯವಾಚಕರೇ, ಗ್ರಹಲೀಲೆಯೆಂದರೆ ಏನೆಂದು ನಿಮಗೆ ಇದೊಂದು ವಿಚಿತ್ರ ಸಂಗತಿಯಾಗಿ ತೋರಿರಬಹುದಲ್ಲವೇ? ಆಕಾಶದಲ್ಲಿರುವ ಗ್ರಹಗಳಿಗೂ ಪೃಥ್ವಿಯ ಮೇಲಿರುವ ಪ್ರಾಣಿಗಳಿಗೂ ಒಂದು ಬಗೆಯ ಸಂಬಂಧವಿರುತ್ತದೆ. ಈ ಸಂಬಂಧವನ್ನು ಜ್ಯೋತಿಶ್ಶಾಸ್ತ್ರವು ಮನುಷ್ಯನು ಆಯುಃಕ್ರಮಣದಲ್ಲಿ ಪಡೆಯಬಹುದಾದ ಸರ್ವಸಂಗತಿಗಳನ್ನು ಹೇಳಬಲ್ಲದು; ಆದರೆ ಈಗ ಜ್ಯೋತಿರ್ವಿದರಾದ ಭಾಸ್ಕರಾಚಾರ್ಯರಂಥ ಗಣಿತಕೋವಿದರಿಲ್ಲದ್ದರಿಂದ ಫಲಜ್ಯೋತಿಷದಲ್ಲಿ ಎಲ್ಲವೂ ನಿದರ್ಶನಕ್ಕೆ ಬರುವದಿಲ್ಲ. ಕಾಲಮಾನದಂತೆ ಜ್ಯೋತಿಷಕ್ಕೆ ಹೊಸ ಚಾಲನೆ ಕೊಡುವಷ್ಟು ಸಮರ್ಥರು ಉದಯಿಸುವ ವರೆಗೆ ಹೀಗೆಯೇ ಸಾಗುವದು. ಹೀಗೆ ಜ್ಯೋತಿಷಫಲದಲ್ಲಿ ಪಂಚ ಭವತಿ-ಪಂಚ ನ ಭವತಿಯಾದರೂ ಜ್ಯೋತಿಶ್ಶಾಸ್ತ್ರಕ್ಕಿದ್ದ ಮಹತ್ವವು ಕಡಿಮೆಯಾಗಲಾರದು. ಜ್ಯೋತಿಷಶಾಸ್ತ್ರದಿಂದ ನಮಗೆ ನಿಜವಾದ ಅನುಭವ ಸಿಗಬೇಕಾದರೆ ಅಂಥ ದೈವಜ್ಞನೇ ಹುಟ್ಟಿ ಬರಬೇಕು. ಈಗಿನ ಕಾಲದಲ್ಲಿ ಒಂದು ಪಂಚಾಂಗದಲ್ಲಿ ಇಂಥ ದಿನ ಇಂಥ ನಕ್ಷತ್ರವೆಂದು ಬರೆದಿದ್ದರೆ, ಮತ್ತೊಂದು ಪಂಚಾಂಗದಲ್ಲಿ ಅದೇ ದಿನ ಬೇರೆ ನಕ್ಷತ್ರವೆಂದು ಬರೆದಿರುವದು. ಮತ್ತೊಂದು ಪಂಚಾಂಗದಲ್ಲಿ ಅದೇ ದಿನ ಮತ್ತೊಂದು ನಕ್ಷತ್ರಯೋಗಕರಣಗಳಿರುತ್ತವೆ. ಇಂಥ ಪಂಚಾಂಗಕರ್ತರೇ ಅಪಹಾಸ್ಯಕ್ಕೆ

ಕಾರಣರಾಗುವರಲ್ಲದೆ, ಜ್ಯೋತಿಷಶಾಸ್ತ್ರವು ಅಪಹಾಸ್ಯಕ್ಕೆ ಕಾರಣವಾಗಲಾರದು. ಹಿಂದಕ್ಕೆ ವಿಕ್ರಮ ಮೊದಲಾದ ರಾಜರು ಶನಿಗ್ರಹಪೀಡಿತರಾಗಿ ತುಂಬಾ ಕಷ್ಟಪಡಲಿಲ್ಲವೇ? ಗ್ರಹಗಳು ದುಷ್ಟಸ್ಥಾನದಲ್ಲಿದ್ದಾಗ ಮನುಷ್ಯನಿಗೆ ಕಾಲವೈಪರೀತವನ್ನೆಸಗುವದು. ಮಿತ್ರರು ಶತ್ರುಗಳಾಗುವರು, ಕಷ್ಟವು ಹತ್ತಿರಿಸಿ ಬರುವದು; ಆದರೆ ಆ ಕಾಲದಲ್ಲಿ ಮನುಷ್ಯನು ಧೈರ್ಯವನ್ನು ತಂದುಕೊಂಡು ಸದಾಚಾರ ಸಂಪನ್ನನಾಗಿ ನಡೆದರೆ, ಮುಂದೆ ಗ್ರಹದೆಶೆಯು ತಿರುಗಿ ಅವನಿಗೆ ಸುಖದ ದಿನಗಳು ಒಲಿದೋರುವವು. ಪ್ರಸ್ತುತದಲ್ಲಿ ಗೋವಿಂದರಾಯನ ಸ್ಥಿತಿಯು ಹೀಗೆಯೇ ಇದ್ದುದರಿಂದ ಇದಕ್ಕೆ ಗ್ರಹಲೀಲೆಯೆನ್ನಬೇಕು.

† † † † † †

ಪೌರಾಣಿಕ ಕಾಲದಲ್ಲಿ ಎಷ್ಟೋ ವ್ಯಕ್ತಿಗಳು ಇಂಥ ಗ್ರಹಲೀಲೆಗೆ ಈಡಾಗಿ ಕಷ್ಟಪಟ್ಟಿರುವವು. ಈಗಿನ ಕಾಲದಲ್ಲಾದರೂ ಅನೇಕ ವ್ಯಕ್ತಿಗಳು ಕಷ್ಟಪಡುತ್ತಿರುವವು; ಆದರೆ ಮನುಷ್ಯನು ದುರ್ದೈವಿಯಾದರೆ ಅವನಿಗೆ ಗ್ರಹಕಾಟವೇ ಎಂದು ಭಾವಿಸಿ ಉಪಾಯ ಶೂನ್ಯರಾಗಿ ಕುಳಿತುಕೊಳ್ಳಬಾರದು. ಮನುಷ್ಯನು ಮುಂದಕ್ಕೆ ಪ್ರಯತ್ನವನ್ನು ಸರ್ವದಾ ಮಾಡುತ್ತಿರಬೇಕು; ಮತ್ತು ತನ್ನ ಶೀಲವನ್ನು ಕಾಯ್ದುಕೊಳ್ಳಬೇಕು. ವಿಪತ್ತಿನಲ್ಲಿ ಶೀಲಭ್ರಷ್ಟನಾಗುವವನು ಯಾವ ಜನ್ಮದಲ್ಲಿಯೂ ಸುದಿನವನ್ನು ಕಾಣಲಾರನು. ಆದ್ದರಿಂದ ಮನುಷ್ಯನಿಗೆ ತಾರಕವಾದ ಶೀಲವನ್ನು ಮುಖ್ಯವಾಗಿ ಕಾಪಾಡಿಕೊಳ್ಳಲೇ ಬೇಕು. ಗ್ರಹದೆಸೆಯು ತಿರುಗಿದಾಗ ಮನುಷ್ಯನು ವಿವೇಕಶೂನ್ಯನಾಗಿ ಮನಬಂದಂತೆ ಕುಣಿದಾಡುವದು ಅಶ್ರೇಯಸ್ಕರವು. ಕೆಲವರು ಮೂಲತಃ ಜ್ಯೋತಿಷಶಾಸ್ತ್ರದಲ್ಲಿ ವಿಶ್ವಾಸವಿಲ್ಲದವರು ಈ ಗ್ರಹದೆಸೆಯನ್ನು ಒಪ್ಪಲಾರರು. ಅಂಥವರಿಗೆ

ಉತ್ತರ ಹೇಳುವ ಕಾರಣವಿಲ್ಲ. ಮನುಷ್ಯನು ಜ್ಯೋತಿಷಶಾಸ್ತ್ರದಲ್ಲಿ ವಿಶ್ವಾಸವುಳ್ಳವನೇ ಇರಲಿ, ಇಲ್ಲದವನೇ ಇರಲಿ, ಯಾವನಿದ್ದರೂ ಪ್ರಪಂಚದಲ್ಲಿರುವ ಸುಖದುಃಖಗಳನ್ನು ಒಪ್ಪಲೇಬೇಕು. ಮುಖ್ಯವಾಗಿ ಹೇಳತಕ್ಕದ್ದೇನಂದರೆ:—ಪ್ರಾಪಂಚಿಕರಿಗೆ ವಿಪತ್ತು ಬರುವದು ಸ್ವಾಭಾವಿಕವಾಗಿದೆ ಅಂಥ ವಿಪನ್ನಾವಸ್ಥೆಯಲ್ಲಿ ವಿವೇಕವನ್ನು ತಂದುಕೊಳ್ಳುವದೇ ಪ್ರಾಪಂಚಿಕರಿಗೆ ಸುಖದ ದಿನಗಳ ವೃದ್ಧಿಯಿಂದ ಮಹತ್ವದ್ದಾಗಿದೆ. ಹಾಗೆ ವಿವೇಕಭ್ರಷ್ಟರಾದವರ ಅಧಃಪತನವು ಹಲವು ಮಾರ್ಗಗಳಿಂದ ಆಗುತ್ತದೆ ಈ ಸಂಗತಿಯನ್ನು ಭರ್ತೃಹರಿಯಂಥ ಕವಿಗಳು ವಿಶದವಾಗಿ ವರ್ಣಿಸಿರುತ್ತಾರೆ. ಒಟ್ಟಿನ ಮೇಲೆ ಈ ಕಾದಂಬರಿಯಿಂದ ಬೋಧ ತಕ್ಕೊಳ್ಳುವದೇನಂದರೆ,--ಭಾಗೀರಥಿದೇವಿ, ಸದಾಶಿವನಂಥ ವಿವೇಕಿಗಳಾಗಬೇಕೆಂಬದೇ ಮಹತ್ವದ ಸಂಗತಿಯಾಗಿದೆ.

ಸರ್ವೇ ಜನಾಃ ಸುಖಿನೋ ಭವಂತು!!!




ಇದು ಆನಂದವನ ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಥ. ಪ. ಕಾಳೆ ಇವರಿಂದ ಮುದ್ರಿಸಲ್ಪಟ್ಟಿತು.